ಶ್ರೀಃ

ಶ್ರೀ ಕಲ್ಕಿಸಿಂಹ ಭಗವತ್ಪ್ರಬನ್ಧಮಾಲಾ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

ಎಂಬ

## ಸಹಸ್ರಗಾಥಾತ್ಮಕ - ದ್ರಾವಿಡ ದಿವ್ಯಪ್ರಬನ್ಧ



ಶ್ರೀ ಕಲ್ಕಿಸಿಂಹಭಗವದ್ವಿರಚಿತವಾದ—(೧) ಕನ್ನಡಪ್ರತಿಪದಾರ್ಥ

(೨) ಸಂಸ್ಕೃತಪದ್ಯಾತ್ಮಕ—ಸಹಸ್ರಗಾಥಾರತ್ನಾವಳೀ

(೩) ಕನ್ನಡತಾತ್ಪರ್ಯ—ಸಮೇತ

(ದ್ರಮಿಡೋಪನಿಷತ್ಸಂಗತಿ-ದ್ರಮಿಡೋಪನಿಷತ್ತಾತ್ಪರ್ಯರತ್ನಾವಳೀ-ಸಹಿತ)



**೬ನೆಯ ಸಂಚಿಕೆ**

**ಷಷ್ಠ ಶತಕ**

**(ಸವ್ಯಾಖ್ಯಾನ)**



ಬೆಂಗಳೂರು

ವೆ. ಬಿ. ಸುಬ್ಬಯ್ಯ ಅಂಡ್ ಸನ್ಸ್ ಯವರ

ಎಲೆಕ್ಟ್ರಿಕ್ ಮುದ್ರಾಕ್ಷರಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

1931.

೧೦ ಸಂಚಿಕೆಗಳುಳ್ಳ
ಸಮಗ್ರ-ಪ್ರಬನ್ಧದ ಕ್ರಯ
ರೂ. 6-0-0.

ಈ ಸಂಚಿಕೆಯ ಬೆಲೆ
12 ಆಣೆ.

ಶ್ರೀಃ

ಶ್ರೀಮತೇ ರಾಮಾನುಜಾಯ ನಮಃ

ಶ್ರೀಮತೇ ಶಠಕೋಪಾಯ ನಮಃ

ಶ್ರೀ ಶಠಾರಿಮುನಿ ವಿರಚಿತವಾದ

# ತಿರುವಾಯ್ಮೊೞಿ

## (ಷಷ್ಠ ಶತಕ)

ಶ್ರೀ ಕಲ್ಕಿಸಿಂಹ ಭಗವದ್ವಿರಚಿತ—ವ್ಯಾಖ್ಯಾನಸಹಿತ.

---

ಶ್ರೀಮಾನ್ ಜಯತಿ ಕಲ್ಕೀನ್ದ್ರಃ ನಾರಸಿಂಹಃ ಪರಾತ್ಪರಃ ।
ಪರಿತ್ರಾಣಾಯ ಸಾಧೂನಾಂ ಕೃತಾವತರಣೋ ಹರಿಃ ॥

## ಷಷ್ಠ ಶತಕದಲ್ಲಿ—ಪ್ರಥಮದಶಕ.

(ವೈಕಲ್ ಪೂಙ್ಕೞಿವಾಯ್—)

---

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ತಿರುವಣ್ವಣ್ಡೂರ್—ಎಂಬ ಶ್ರೀಮಧುಕೃತ್ಪುರಿಯ ಸ್ವಾಮಿಯನ್ನು ಕುರಿತು ಪಕ್ಷಿಗಣಗಳನ್ನು ಪ್ರೇರಿಸುತ್ತಾರೆ.)

---

(೧) ವೈಕಲ್ ಪೂಙ್ಕೞಿವಾಯ್ ವನ್ದು
ಮೇಯುಮ್ ಕುರುಕಿನಙ್ಗಾಳ್,
ಶೆಯ್‌ಕೊಳ್ ಶೆನ್ನೆಲುಯರ್
ತಿರುವಣ್ವಣ್ಡೂರುಱೈಯುಮ್,
ಕೈಕೊಳ್ ಶಕ್ಕರತ್ತೆನ್ ಕನಿವಾಯ್ ಪೆರುಮಾನೈಕ್ಕಣ್ಡು,
ಕೈಕಳ್‌ಕೂಪ್ಪಿ ಚ್ಚೊಲ್ಲೀರ್ ವಿನೈಯಾಟ್ಟಿಯೇನ್
ಕಾದನ್ಮೈಯೇ.

ಪ್ರ|| ವೈಕಲ್-ಪ್ರತಿದಿನವೂ, ಪೂಮ್-ರಮ್ಯವಾದ, ಕೞಿವಾಯ್-ಕಂಧಕದಲ್ಲಿ, ವನ್ದು-ಬಂದು, ಮೇಯುಮ್ - ಆಹಾರವನ್ನು ಹುಡುಕುತ್ತಿರುವ, ಕುರುಕಿನಙ್ಗಾಳ್-**ಕುರುಕು** ಎಂಬ ಪಕ್ಷಿಗಳ ಸಮೂಹಗಳೇ!, ಶೆಯ್-ಗದ್ದೆಗಳನ್ನು, **ಕೊಳ್**-ತುಂಬ ಆಕ್ರಮಿಸಿರುವ, ಶೆನ್ನೆಲ್-ಕೆಂಪುಬತ್ತದ ಪಯಿರು, ಉಯರ್-ಎತ್ತರವಾಗಿ ಬೆಳೆದಿರುವ, ತಿರುವಣ್ವಣ್ಡೂರ್-ಶ್ರೀಮಧುಕೃತ್ಪುರಿಯಲ್ಲಿ, ಉಱೈಯುಮ್-ನಿತ್ಯವಾಸಮಾಡುವ, ಕೈಕೊಳ್-ಕೈಯಲ್ಲಿ ಧರಿಸಲ್ಪಟ್ಟ, ಶಕ್ಕರಮ್-ಚಕ್ರವುಳ್ಳ, ಎನ್- ನನ್ನ, ಕನಿವಾಯ್-ಬಿಂಬಾಧರವುಳ್ಳ, ಪೆರುಮಾನೈ-ಸ್ವಾಮಿಯನ್ನು, ಕಣ್ಡು-ನೋಡಿ, ಕೈಕಳ್ಕೂಪ್ಪಿ-ಅಂಜಲಿಮಾಡಿ, ವಿನೈಯಾಟ್ಟಿಯೇನ್-(ವಿಶ್ಲೇಷ ಜನಕವಾದ) ಪಾಪವುಳ್ಳ ನನ್ನ, ಕಾದನ್ಮೈ-ಆಶಾಧಿಕ್ಯವನ್ನು, ಶೊಲ್ಲೀರ್-(ಅವನಿಗೆ) ತಿಳಿಯಪಡಿಸಿರಿ.

( ಸ-ಗಾ-ರ || )—

ಯೂಯಂ ಹೇ ಕುರುಕಾ ಉಪೇತ್ಯ ಸತತಂ ಚಾಹಾರಸಮ್ಮಾರ್ಗಣಾ-
ಸ್ಸಮ್ಯಗ್ವ್ರೀಹಿಸಮೃದ್ಧಸಸ್ಯನಿಚಯೇ ಶ್ರೀಚಕ್ರಪಾಣಿಂ ಹರಿಮ್ |
ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭುಂ ದೃಷ್ಟ್ವಾ ಮಮೇಮಾಂ ದಶಾಂ
ಪಾಪಿನ್ಯಾಸ್ತು ಮುಹುಃ ಕೃತಾಞ್ಜಲಿಪುಟಾ ಆವೇದ್ಯ ಧನ್ಯಾಸ್ಸ್ಥ ಭೋಃ ||

ತಾ|| (ಕೆಲವು **ಕುರುಕು**—ಎಂಬ ಪಕ್ಷಿಗಳನ್ನು ನೋಡಿ, "ನೀವು ತಿರುವಣ್ವಣ್ಡೂರಿಗೆ ಹೋಗಿ ನನ್ನಸ್ವಾಮಿಗೆ ನನ್ನ ಈ ದಶೆಯನ್ನು ತಿಳಿಸಿರಿ"—ಎಂದು ಶಠಾರಿಯೆಂಬ ನಾಯಕಿಯು ಹೇಳುತ್ತಾಳೆ.)

ಪ್ರತಿದಿನವೂ ರಮ್ಯವಾದ ಕಂದಕದಲ್ಲಿ ಬಂದು ಆಹಾರವನ್ನು ಹುಡುಕುವ **ಕುರುಕು** ಪಕ್ಷಿಗಳೇ! ಗದ್ದೆಗಳಲ್ಲಿ ತುಂಬಿ ಬೆಳೆದಿರುವ ಉನ್ನತವಾದ ಕೆಂಪು ಬತ್ತದ ಪಯಿರುಳ್ಳ ತಿರುವಣ್ವಣ್ಡೂರಿನಲ್ಲಿ ವಾಸಮಾಡುವ ಚಕ್ರಪಾಣಿಯಾದ ಬಿಂಬಾಧರವುಳ್ಳ ನನ್ನ ಸ್ವಾಮಿಯನ್ನು ಕಂಡು ನೀವು ಅಂಜಲಿಮಾಡಿ ನನ್ನ ಮನೋರಥವನ್ನು ತಿಳಿಯಪಡಿಸಿರಿ.

(೨) ಕಾದಲ್ ಮೆನ್ಪೆಡೈಯೊಡುಡನ್ ಮೇಯುಮ್
ಕರುನಾರಾಯ್,
ವೇದವೇಳ್ವಿಯೊಲಿ ಮುೞಙ್ಗುಮ್ ತಣ್ತಿರುವಣ್ವಣ್ಡೂರ್,
ನಾದನ್ ಞಾಲಮೆಲ್ಲಾಮುಣ್ಡ ನಮ್ಪೆರುಮಾನೈ ಕ್ಕಣ್ಡು,
ಪಾದಮ್ ಕೈತೊೞುದು ಪಣಿಯೀರಡಿಯೇನ್ ತಿಱಮೇ.

ಪ್ರ॥ ಕಾದಲ್ – ಪ್ರೀತಿಯ ಅತಿಶಯದಿಂದ, ಮೆ – ಸುಕುಮಾರವಾದ, ಪೆಡೈಯೋಡು – ಸ್ತ್ರೀಪಕ್ಷಿಯೊಡನೆ, ಉಡನ್-ಕೂಡಿ, ಮೇಯುಮ್-ಮೇಯುವ, ಕರುನಾರಾಯ್ – **ಕರೀನಾರಾಯ್** ಎಂಬ ಪಕ್ಷಿಯೇ !, ವೇದವೊಲಿ-ವೇದ ಘೋಷವೂ, ವೇಳ್ವಿಯೊಲಿ-ವೈದಿಕಕರ್ಮಕೋಲಾಹಲವೂ, ಮುೞಙ್ಗುಮ್-ಪ್ರಬಲ ವಾಗಿ ಶಬ್ದಿಸುವ, ತಣ್-ಶೀತಳವಾದ, ತಿರುವಣ್‌ವಣ್ಡೂರ್-ಶ್ರೀ ಮಧುಕೃತ್ಪುರಿಗೆ, ನಾದನ್ – ಸ್ವಾಮಿಯಾದ, ಞಾಲಮೆಲ್ಲಾಮ್ – ಸಕಲಲೋಕಗಳನ್ನೂ, ಉಣ್ಡ– (ಪ್ರಳಯದಲ್ಲಿ) ಭಕ್ಷಿಸಿ ರಕ್ಷಿಸಿದ, ನವ್ ಪೆರುಮಾನೈ – ನಮ್ಮ ಸ್ವಾಮಿಯನ್ನು, ಕಣ್ಡು-ಕಂಡು, ಪಾದಮ್‌ಕೈತ್ತೊೞುದು – (ಅವನ) ಪಾದಗಳಿಗೆ ಅಂಜಲಿಮಾಡಿ, ಅಡಿಯೇನ್ ತಿಱಮ್-ನನ್ನ ಕಡೆಯಿಂದ, ಪಣಿಯಿರ್-ಒಂದು ಮಾತನ್ನು ಹೇಳಿರಿ.

( ಸ–ಗಾ-ರ ॥ )—

ತ್ವಂ ಮೇ ಶ್ಯಾಮಲ ! ಸಾರಪಕ್ಷಿವರ ! ಸ್ತ್ರೀ ಕಾನ್ತಯಾನುಪ್ರೇಮತ-
ಶ್ಚಾಹಾರಾನುಚರ ! ಶ್ರುತಿಧ್ವನಿಮಯೇ ಯಜ್ಞಾದಿಕೋಲಾಹಲೈಃ |
ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭುಂ ಶ್ರೀಶಂ ಜಗದ್ರಕ್ಷಕಂ
ದೃಷ್ಟ್ವಾ ಸಾಞ್ಜಲಿರಂಘ್ರಿಪದ್ಮಯುಗಳೇ ದೀನಾಂ ದಶಾಂ ಮೇ ವದ ||

ತಾ॥ ಪ್ರೀತ್ಯತಿಶಯದಿಂದ ಸುಕುಮಾರವಾದ ಸ್ತ್ರೀಪಕ್ಷಿಯೊಡನೆ ಕೂಡಿ ಮೇಯುವ **ಕರೀನಾರಾಯ್**—ಎಂಬ ಪಕ್ಷಿಯೇ ! ವೇದಘೋಷದಿಂದಲೂ ವೈದಿಕರ ಕರ್ಮಾನುಷ್ಠಾನದ ಕೋಲಾಹಲದಿಂದಲೂ ಶಬ್ದಿಸುತ್ತಿರುವ ತಿರುವಣ್ ವಣ್ಡೂರಿಗೆ ನಾಥನಾದ ಸಕಲಲೋಕಭಕ್ಷಕನಾದ ನಮ್ಮ ಸ್ವಾಮಿಯನ್ನು ಕಂಡು ಅವನ ಪಾದಗಳಿಗೆ ಅಂಜಲಿಮಾಡಿ ನನ್ನ ಕಡೆಯಿಂದ ಒಂದು ಮಾತನ್ನು ಅವನಿಗೆ ಹೇಳಿರಿ.

(೩) ತಿಱಙ್ಗಳಾಕಿ ಯೆಙ್ಗುಮ್ ಶೆಯ್‌ಕಳೊಡುೞಲ್
ಪುಳ್ಳಿನಙ್ಗಾಳ್,
ಶಿಱನ್ದಶೆಲ್ವಮ್ ಮಲ್‌ಕು ತಿರುವಣ್‌ವಣ್ಡೂರುಱೈಯುಮ್,
ಕಱಙ್ಗು ಶಕ್ಕರಕ್ಕೈಕ್ಕನಿವಾಯ್ ಪ್ಪೆರುಮಾನೈಕ್ಕಣ್ಡು,
ಇಱಙ್ಗಿ ನೀರ್ ತೊೞುದು ಪಣಿಯಿರಡಿಯೇನಿಡರೇ.

ಪ್ರ॥ ತಿಱಙ್ಗಳಾಕಿ – ನಾನಾಪ್ರಕಾರಗಳಿಂದ, ಎಙ್ಗುಮ್ – ಸರ್ವದಿಕ್ಕು ಗಳಲ್ಲೂ, ಶೆಯ್‌ಕಳೊಡು – ಗದ್ದೆಗಳಲ್ಲಿ, ಉೞಲ್ – ಸಂಚರಿಸುವ, ಪುಳ್ ಇನಙ್ಗಾಳ್-ಪಕ್ಷಿಸಮೂಹಗಳೇ !, ಶಿಱನ್ದ – ತನ್ನ ಗೌರವಕ್ಕೆ ತಕ್ಕ, ಶೆಲ್ವಮ್-

ಐಶ್ವರ್ಯವು, ಮಲ್ಕು–ಅಧಿಕವಾಗಿರುವ, ತಿರುವಣ್ವಣ್ಡೂರ್–ಶ್ರೀಮಧುಕೃತ್ಪುರಿಯಲ್ಲಿ, ಉಱ್ಱೈಯುಮ್–ನಿತ್ಯವಾಸಮಾಡುವ, ಕೞಙ್ಗ – ಸುತ್ತಿ ಸುತ್ತಿ ಬರುವ, ಶಕ್ಕರ–ಚಕ್ರವನ್ನು, ಕೈ–ಹಸ್ತದಲ್ಲಿ ಧರಿಸಿರುವ, ಕನಿವಾಯ್–ಬಿಂಬಾಧರವುಳ್ಳ, ಪೆರುಮಾನೈ–ಸ್ವಾಮಿಯನ್ನು, ಕಣ್ಡು–ಕಂಡು, ನೀರ್–ನೀವು, ಇಱಙ್ಗಿ–ನಮ್ರತೆಯಿಂದ, ತೊೞುದು–ನಮಸ್ಕರಿಸಿ, ಅಡಿಯೇನ್–ಪರತನ್ತ್ರಯಾದ ನನ್ನ, ಇಡರ್–ವಿಶ್ಲೇಷದುಃಖವನ್ನು, ಪಣಿಯಿರ್–ಹೇಳಿರಿ

( ಸ–ಗಾ–ರ ॥ )—

ಯೂಯಂ ಪಕ್ಷಿಗಣಾ ಉಪೇತ್ಯ ಪರಿತಃ ಕೇದಾರಸಞ್ಚಾರಿಣೋ
ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭುಂ ಶ್ರೀಚಕ್ರಪಾಣಿಂ ಹರಿಮ್ ।
ದೃಷ್ಟ್ವಾ ತಂ ಪರಮಂ ಪ್ರಣಮ್ಯ ಕೃಪಯಾ ಬಿನ್ಬಾಧರಂ ಬ್ರೂತ ಭೋಃ!
ದೀನಾಯಾ ಮಮ ದುರ್ದಶಾಂ ಭೃಶಮಿಮಾಂ ವಿಶ್ಲೇಷದುಃಖಾತ್ಮಿಕಾಮ್ ॥

ತಾ॥ ನಾನಾಪ್ರಕಾರಗಳಿಂದ ಸರ್ವದಿಕ್ಕುಗಳಲ್ಲೂ ಗದ್ದೆಗಳಲ್ಲಿ ಸಂಚರಿಸುವ ಪಕ್ಷಿಸಮೂಹಗಳೇ! ಐಶ್ವರ್ಯಸಮೃದ್ಧಿಯುಳ್ಳ ಶ್ರೀಮಧುಕೃತ್ಪುರಿಯಲ್ಲಿ ವಾಸಮಾಡುವ ಚಕ್ರಧಾರಿಯಾದ ಬಿಂಬಾಧರವುಳ್ಳ ಸ್ವಾಮಿಯನ್ನು ಕಂಡು ನೀವು ನಮ್ರತೆಯಿಂದ ನಮಸ್ಕರಿಸಿ ಈ ನನ್ನ ವಿಶ್ಲೇಷ ದುಃಖವನ್ನು ತಿಳಿಸಿರಿ.

(೪) ಇಡರಿಲ್ ಪೋಕಮೂೞ್ಕಿ ಯಿಣೈನ್ದಾಡುಮ್
ಮಡವನ್ನಙ್ಗಾಳ್,
ವಿಡಲಿಲ್ ವೇದವೊಲಿ ಮುೞಙ್ಗುಮ್
ತಣ್ ತಿರುವಣ್ವಣ್ಡೂರ್,
ಕಡಲ್ಮೇನಿಪ್ಪಿರಾನ್ ಕಣ್ಣನೈ ನೆಡುಮಾಲೈ ಕ್ಕಣ್ಡು,
ಉಡಲಮ್ ನೈನ್ದೊರುತ್ತಿ ಯುರುಕುಮೆನ್ಱುಣರ್ತ್ತುಮಿನೇ.

ಪ್ರ॥ ಇಡರಿಲ್–ವಿಶ್ಲೇಷದುಃಖವಿಲ್ಲದ, ಪೋಕ–ಭೋಗದಲ್ಲಿ, ಮೂೞ್ಕಿ–ಮುಳುಗಿ, ಇಣೈನ್ದು–ಜೋಡಿಯಾಗಿಯೇ, ಆಡುಮ್–ಸಂಚರಿಸುವ, ಮಡ ಅನ್ನಙ್ಗಾಳ್–ಪರಸ್ಪರ ಪ್ರಣಯಾತಿಶಯವುಳ್ಳ ಹಂಸಪಕ್ಷಿಗಳಿರಾ!, ವಿಡಲಿಲ್–ಅವಿಚ್ಛಿನ್ನವಾದ, ವೇದವೊಲಿ–ವೇದಘೋಷವೂ, ಮುೞಙ್ಗುಮ್–ಮೊಳಗುತ್ತಿರುವ, ತಣ್–ಶ್ರಮಹರವಾದ, ತಿರುವಣ್ವಣ್ಡೂರ್ – ಶ್ರೀ ಮಧುಕೃತ್ಪುರಿಯಲ್ಲಿರುವ, ಕಡಲ್ಮೇನಿಪಿರಾನ್–ಸಮುದ್ರವರ್ಣನಾದ ಸ್ವಾಮಿಯಾದ, ಕಣ್ಣನೈ – ಶ್ರೀಕೃಷ್ಣನನ್ನು, ನೆಡು

ಮಾಲ್-ಮಹಾಮಹಿಮನಾದ ಪರಮಪುರುಷನನ್ನು, ಕಣ್ಣು-ಕಂಡು, ಒರುತ್ತಿ-ಒಬ್ಬಳು, ಉಡಲಮ್-ತನ್ನ ಶರೀರವು, ನೈನ್ದು-ಶಿಥಿಲವಾಗಿ, ಉರುಕುಮ್-ದ್ರವೀಭೂತೆಯಾಗುತ್ತಿದಾಳೆ, ಎನ್ನು-ಎಂದು, ಉಣರ್ತ್ತುಮಿನ್-ತಿಳಿಸಿರಿ.

( ಶ-ಗಾ-ರ ॥ )—

**ಭೋ ಭೋ ಹಂಸಗಣಾಃ ! ಪ್ರಿಯಾಸಹಚರಾಃ ! ಕಾನ್ತಂ ಮಮ ಶ್ರೀಧರಂ**
**ರಮ್ಯೇ ಶ್ರೀಮಧುಕೃತ್ಪುರೇ ಶ್ರುತಿರವೈಸ್ಸಾನ್ದ್ರೇ ವಸನ್ತಂ ಹರಿಮ್ ।**
**ದೃಷ್ಟ್ವಾಽಮ್ಭೋಧಿನಿಭಂ ಪ್ರಭುಂ ಮಮ ವಿಭುಂ ಕೃಷ್ಣಂ ಪ್ರಿಯಂ**
**ಬ್ರೂತ ತಂ**
**ಕಾಚಿತ್ತ್ವದ್ವಿರಹಾತುರಾಽತಿಶಿಥಿಲಾ ಶೋಕದ್ರುತೇತ್ಯೇವ ಮಾಮ್ ॥**

ತಾ॥ ಅವಿಚ್ಛಿನ್ನವಾದ ಭೋಗರಸಾಮ್ಬುಧಿಯಲ್ಲಿ ಮಗ್ನರಾಗಿ ಸ್ತ್ರೀಸಮೇತರಾಗಿಯೇ ಸಂಚರಿಸುವ ಪರಸ್ಪರ ಪ್ರೇಮಾತಿಶಯವುಳ್ಳ ಹಂಸಪಕ್ಷಿಗಳಿರಾ ! ಸನ್ತತ ವೇದಘೋಷವುಳ್ಳ ಶ್ರಮಹರವಾದ ಶ್ರೀಮಧುಕೃತ್ಪುರಿಯಲ್ಲಿರುವ ಸಮುದ್ರವರ್ಣನಾದ ಮಹಾಮಹಿಮೆಯುಳ್ಳ ಶ್ರೀಕೃಷ್ಣನನ್ನು ಕಂಡು—ಒಬ್ಬ ನಾಯಕಿಯು ನಿಮಗೋಸ್ಕರ ಶರೀರ ಶೈಥಿಲ್ಯವಂಹೊಂದಿ ದ್ರವೀಭೂತೆಯಾಗುತ್ತಿದಾಳೆಂದು ನನ್ನ ದಶೆಯನ್ನು ತಿಳಿಸಿರಿ.

(೨) ಉಣರ್‌ತ್ತಲೂಡಲುಣರ್‌ನ್ದುರ್ದ ಮೇಯುಮ್
ಮಡವನ್ನಙ್ಗಾಳ್,
ತಿಣರ್‌ತ್ತ ವಣ್ಡಲ್‌ಕಳ್‌ಮೇಲ್ ಶಙ್ಗುಶೇರುಮ್
ತಿರುವಣ್‌ವಣ್ಡೂರ್,
ಪುಣರ್‌ತ್ತ ಪೂನ್ತಣ್ತುಳಾಯ್‌ಮುಡಿ
ನಮ್‌ಪೆರುಮಾನ್ಕ್ಕ ಕಣ್ಡು,
ಪುಣರ್‌ತ್ತ ಕೈಯಿನರಾಯಡಿಯೇನುಕ್ಕುಮ್
ಪೋಳ್‌ಮಿನೇ.

ಪ್ರ॥ ಉಣರ್‌ತ್ತಲ್ – ಸಂಶ್ಲೇಷದ ಸೌಖ್ಯವನ್ನೂ, ಊಡಲ್-ವಿಶ್ಲೇಷದ ದುಃಖವನ್ನೂ, ಉಣರ್‌ನ್ದು-ತಿಳಿದು, ಉರ್ದ-ಕೂಡಿಯೇ, ಮೇಯುಮ್-ಮೇಯುತ್ತಿರುವ, ಮಡ ಅನ್ನಙ್ಗಾಳ್-ಪರಸ್ಪರ ಪ್ರೀತಿಯುಳ್ಳ ಹಂಸಗಳಿರಾ !, ತಿಣರ್‌ತ್ತ-ರಾಶಿಯಾದ, ವಣ್ಡಲ್‌ಕಳ್‌ಮೇಲ್ – ನೀರಿನಪಕ್ಕದ ಮರಳುಗುಡ್ಡೆಗಳಮೇಲೆ,

ಶಙ್ಗ-ಸಣ್ಣ ಸಣ್ಣ ಶಂಖಗಳು, ಶೇರುಮ್-ಸೇರುತ್ತಿರುವ, ತಿರುವಣ್ವಣ್ಡೂರ್-ಶ್ರೀಮಧುಕೃತ್ಪುರಿಯಲ್ಲಿ, ಪುಣರ್ತ್ತ-ಮಾಲೆಯಾಗಿ ರಚಿಸಲ್ಪಟ್ಟ, ಪೂಮ್-ರಮ್ಯವಾದ, ತಣ್ತುೞಾಯ್-ದಿವ್ಯತುಳಸಿಯುಳ್ಳ, ಮುಡಿ-ಕಿರೀಟವನ್ನು ಧರಿಸಿರುವ, ನಮ್ ಪೆರುಮಾನ್ಯೆ-ನಮ್ಮ ಸ್ವಾಮಿಯನ್ನು, ಕಣ್ಡು-ಕಂಡು, ಪುಣರ್ತ್ತ-ಅಂಜಲಿಬನ್ಧ ಮಾಡಿದ, ಕೈಯಿನರಾಯ್ - ಹಸ್ತಗಳುಳ್ಳವರಾಗಿ, ಅಡಿಯೇನುಕ್ಕುಮ್-ನನಗೋಸ್ಕರವೂ, ಪೋಱ್ಱುಮಿನ್-ಸ್ತೋತ್ರಮಾಡಿರಿ.

( ಸ-ಗಾ-ರ || )—

ಸಂಶ್ಲೇಷಾತಿಶಯಪ್ರಿಯಾಃ ಪ್ರಿಯತಮಾಸಕ್ತಾಶ್ಚ ಹಂಸಾಃ ಪ್ರಿಯಂ
ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭುಂ ದೃಷ್ಟ್ವಾತ್ರ ಚ
ಕೃತ್ವಾಽಞ್ಜಲಿಮ್ ||
ದಿವ್ಯಶ್ರೀತುಲಸೀಸ್ರಗಞ್ಚಿತಶಿರೋಮೌಳಿಂ ಹರಿಂ ಸಾದರಂ
ಸ್ತೋತ್ರೈರ್ಯುಕ್ತತಮೈರ್ಮಮಾಪ್ಯನುಗುಣೈರ್ಯೂಯಂ ಭೃಶಂ ಶಂಸತ ||

ತಾ|| ಸಂಶ್ಲೇಷದ ಸುಖವನ್ನೂ ವಿಶ್ಲೇಷದ ದುಃಖವನ್ನೂ ತಿಳಿದು ಯಾವಾಗಲೂ ತಮ್ಮ ತಮ್ಮ ಸ್ತ್ರೀಪಕ್ಷಿಗಳೊಡನೆ ಕೂಡಿಯೇ ಮೇಯುತ್ತಿರುವ ಹಂಸಗಳಿರಾ! ಮರಳುಗುಡ್ಡೆಗಳಮೇಲೆ ಸಣ್ಣ ಸಣ್ಣ ಶಂಖಗಳ ಸಮೂಹಗಳುಳ್ಳ ಶ್ರೀ ಮಧುಕೃತ್ಪುರಿಯಲ್ಲಿ ದಿವ್ಯತುಳಸೀಮಾಲಾಲಂಕೃತ ಕಿರೀಟಧಾರಿಯಾದ ನಮ್ಮ ಸ್ವಾಮಿಯನ್ನು ಕಂಡು ಸಾಂಜಲಿಬನ್ಧರಾಗಿ ನನಗೋಸ್ಕರ ಅವನನ್ನು ಸ್ತೋತ್ರಮಾಡಿರಿ.

(೭) ಪೋಱ್ಱಿ ಯಾನಿರನ್ದೇನ್ ಪುನ್ನೈಮೇಲುತ್ತ
ಪೂಙ್ಕುಯಿಲ್‌ಕಾಳ್,
ಶೇಱ್ಱಿಲ್ ವಾಳೈತುಳ್ಳುಮ್
ತಿರುವಣ್ವಣ್ಡೂರುಱೈಯುಮ್,
ಆಱ್ಱಲಾೞಿಯಙ್ಕೈಯಮರರ್ ಪೆರುಮಾನ್ಯೆ ಕ್ಕಣ್ಡು,
ಮಾಱ್ಱಮ್ ಕೊಣ್ಡರುಳೀರ್ ವೈಯಮ್
ಶೀರ್‌ಪೆಱೊರುವಣ್ಣಮೇ.

ಪ್ರ|| ಪುನ್ನೈಮೇಲ್-ಸುರಹೊನ್ನೆಯ ವೃಕ್ಷದಮೇಲೆ, ಉತ್ತ-ವಾಸಮಾಡುವ, ಪೂಮ್ - ರಮಣೀಯವಾದ, ಕುಯಿಲ್‌ಕಾಳ್ - ಕೋಕಿಲೆಗಳೇ! ಪೋಱ್ಱಿ-(ನಿಮ್ಮ ವಿಷಯದಲ್ಲಿ) ಮಂಗಳಾಶಾಸನಮಾಡಿ, ಯಾನ್-ನಾನು, ಇರನ್ದೇನ್-ಪ್ರಾರ್ಥಿ

ಸಿದೆನು. ಶೇಱ್ಱೞಿಲ್ - ಕ್ಷೇತ್ರಗಳ ಕೆಸರಿನ ನೀರಿನಲ್ಲಿ, ವಾಳೈ – ಮೀನುಗಳು, ತುಳ್ಳುಮ್ – ಮೇಲಕ್ಕೆ ಹಾರಿ ಆಡುತ್ತಿರುವ, ತಿರುವಣ್‌ವಣ್ಡೂರ್- ಶ್ರೀ ಮಧುಕೃತ್ಪುರದಲ್ಲಿ, ಉಱೈಯುಮ್–ನಿತ್ಯವಾಸಮಾಡುವ, ಆಱ್ಱಲ್–ಮಹಾಪರಾಕ್ರಮವುಳ್ಳ, ಆೞಿ- ಚಕ್ರದಿಂದ, ಅಮ್–ಅಲಂಕೃತವಾದ, ಕೈ-ಹಸ್ತವುಳ್ಳ, ಅಮರರ್ ಪೆರುಮಾನೈ–ನಿತ್ಯಸೂರೀಶ್ವರನನ್ನು, ಕಣ್ಡು–ಕಂಡು, ಮೈಯಲ್–ನನ್ನ ಭ್ರಮವು, ತೀರ್‌ವದು–ತೀರುವಹಾಗೆ, ಒರುವಣ್ಣಮ್–ಒಂದು ಪ್ರಕಾರದಿಂದ, ಮಾಱ್ಱಮ್-ಪ್ರತ್ಯುತ್ತರವನ್ನು, ಕೊಣ್ಡು –(ಅವನಿಂದ ನನಗೆ) ತಂದು, ಅರುಳೀರ್–(ನನಗೆ) ಉಪಕಾರಮಾಡಿರಿ.

( ಸ–ಗಾ–ರ ॥ )—

**ಪುನ್ನಾಗಾಶ್ರಯಿಣಸ್ತು ಯೂಯಮಧುನಾ ಹೇ ಕೋಕಿಲಾಃ! ಸ್ವಸ್ತಿ ವಃ**
**ಕಿಞ್ಚಿತ್ ಪ್ರಾರ್ಥ್ಯಮಿದಂ ಮಯಾಽಸ್ತಿ ಭರಿತೇ ಕ್ಷೇತ್ರೈಶ್ಚ ಮೀನಾಶ್ರಯೈಃ।**
**ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭುಂ ವೀರಂ ಹರಿಂ ಚಕ್ರಿಣಂ**
**ದೇವೇಶಂ ತ್ವವಲೋಕ್ಯ ಚಾನಯತ ಮೇ ಮೋಹಾನ್ತಕಂ ತದ್ವಚಃ ॥**

ತಾ॥ ಸುರಹೊನ್ನೆ ವೃಕ್ಷದಮೇಲೆ ವಾಸಮಾಡುವ ರಮ್ಯವಾದ ಕೋಕಿಲೆಗಳೇ! ನಿಮ್ಮ ವಿಷಯದಲ್ಲಿ ಮಂಗಳವನ್ನು ಕೋರಿ ನಾನು ಪ್ರಾರ್ಥಿಸಿ ಇರುತ್ತೇನೆ. ಸಸ್ಯಕ್ಷೇತ್ರಸಮೃದ್ಧಿಯುಳ್ಳ ಶ್ರೀ ಮಧುಕೃತ್ಪುರಿಯಲ್ಲಿ ನಿತ್ಯವಾಸಮಾಡುವ ಚಕ್ರಪಾಣಿಯಾದ ನಿತ್ಯಸೂರೀಶ್ವರನನ್ನು ಕಂಡು (ನನ್ನ ಭ್ರಮವು ಹೋಗುವಹಾಗೆ) ಒಂದು ಪ್ರಕಾರದಿಂದ ಅವನ ಪ್ರತ್ಯುತ್ತರವನ್ನು ತಂದು ನನಗೆ ಉಪಕಾರಮಾಡಿರಿ.

(೨) ಒರುವಣ್ಣಮ್ ಶೆನ್ಱು ಪುಕ್ಕೆನಕ್ಕೊನ್ಱುರೈ ಯೊಣ್ ಕಿಳಿಯೇ,
ಶೆರುವೊಣ್ ಪೂಮ್‌ಪೊೞಿಲ್‌ಶೂೞ್ ಶೆಕ್ಕರ್‌ವೇಲೈ
ತ್ತಿರುವಣ್‌ವಣ್ಡೂರ್,
ಕರುವಣ್ಣಮ್ ಶೆಯ್ಯವಾಯ್ ಶೆಯ್ಯಕಣ್ ಶೆಯ್ಯಕೈ
ಶೆಯ್ಯಕಾಲ್,
ಶೆರುವೊಣ್‌ಶಕ್ಕರಮ್ ಶಙ್ಗಡೈಯಾಳಮ್ ತಿರುನ್ದಕ್ಕಣ್ಡೇ.

ಪ್ರ॥ ಒಣ್–ಸೌನ್ದರ್ಯವುಳ್ಳ, ಕಿಳಿಯೇ–ಗಿಣಿಯೇ!, ಶೆರು–ಪರಸ್ಪರಸ್ಪರ್ಧಿಸುವ, ಒಣ್–ರಮಣೀಯವಾದ, ಪೂಮ್–ಪುಷ್ಪಗಳುಳ್ಳ, ಪೊೞಿಲ್–ಉದ್ಯಾನಗಳಿಂದ, ಶೂೞ್–ಪರಿವೃತವಾದ, ಶೆಕ್ಕರ್–ಸಂಧ್ಯಾರಾಗದಿಂದ ಕೆಂಪಾದ, ವೇಲೈ–ಕಾಲವುಳ್ಳ,

ತಿರುವಣ್ ವಣ್ಡೂರ್–ಶ್ರೀ ಮಧುಕೃತ್ಪುರಿಯಲ್ಲಿ, ಒರುವಣ್ಣಮ್–ಒಂದು ಪ್ರಕಾರ ದಿಂದ, ಶೆನ್ಱು–ಹೋಗಿ, ಪುಕ್ಕು–ಪ್ರವೇಶಿಸಿ, (ನಮ್ಮ ಸ್ವಾಮಿಯ) ಕರು–ನೀಲವಾದ, ವಣ್ಣಮ್–ಶರೀರಕಾನ್ತಿಯೂ, ಶೆಯ್ಯವಾಯ್–ಕೆಂಪಾದ ವಕ್ತ್ರವೂ, ಶೆಯ್ಯಕಣ್–ಕೆಂದಾವರೆಯಂತೆ ಇರುವ ಕಣ್ಣೂ, ಶೆಯ್ಯಕೈ–ಕೆಂದಾವರೆಯಂತೆ ಕೈಗಳೂ, ಶೆಯ್ಯ ಕಾಲ್–ಕೆಂದಾವರೆಯಂತೆ ಕಾಲುಗಳೂ, (ಇವುಗಳನ್ನೂ) ಶೆರು–ವಿರೋಧಿನಾಶಕ ವಾದ, ಒಣ್‌ಶಕ್ಕರಮ್–ರಮ್ಯವಾದ ಚಕ್ರಾಯುಧವನ್ನೂ, ಶಙ್ಗು–ಶಂಖವನ್ನೂ, ಅಡೈ ಯಾಳಮ್–ಚಿಹ್ನೆಗಳಾಗಿ, ತಿರುನ್ದ–ಪ್ರತ್ಯಕ್ಷವಾಗಿ (ಚೆನ್ನಾಗಿ), ಕಣ್ಡು–ಕಂಡು, ಎನಕ್ಕು–ನನಗೆ, ಒನ್ಱು–ಒಂದು ಮಾತನ್ನು, ಉರೈ–ಹೇಳು.

( ಸ–ಗಾ–ರ || )—

ಸೌಮ್ಯ ಶ್ರೀಶುಕ ! ದಿವ್ಯಸೂನಭರಿತೈರ್ವೃಕ್ಷೈಸ್ಸ್ವಯಂ ಶೋಭಿತೇ
ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭೋಶ್ಶ್ಯಾಮಂ ವಪುಶ್ಶ್ರೀಪತೇಃ|
ವಕ್ತ್ರಂ ರಕ್ತಸರೋಜವಚ್ಚ ನಯನಂ ತತ್ಪಾಣಿಪಾದಂ ತಥಾ
ದೃಷ್ಟ್ವಾಚ ಶಙ್ಖಸುದರ್ಶನೌ ತದುಚಿತೌ ಕಿಞ್ಚಿನ್ಮದರ್ಥೇ ವದ ||

ತಾ|| ಸುನ್ದರವಾದ ಗಿಣಿಯೇ ! ರಮಣೀಯವಾದ ಪುಷ್ಪೋದ್ಯಾನಗಳಿಂದ ಕೂಡಿದ ಸನ್ನಾಥ್ಯನುರಕ್ತವಾದ ಶ್ರೀಮಧುಕೃತ್ಪುರದಲ್ಲಿ ಹೋಗಿ ಪ್ರವೇಶಿಸಿ ನಮ್ಮ ಸ್ವಾಮಿಯ ನೀಲವರ್ಣವಾದ ಶರೀರಕಾನ್ತಿಯನ್ನೂ ಕೆಂದಾವರೆಯಂತೆ ಇರುವ ವಕ್ತ್ರ-ನೇತ್ರ-ಹಸ್ತ-ಪಾದಗಳನ್ನೂ ಶಂಖಚಕ್ರಗಳನ್ನೂ ಪ್ರತ್ಯಕ್ಷಿಸಿ ನೋಡಿ ಬಂದ ನನಗೆ ಒಂದು ಮಾತನ್ನು ಹೇಳು.

(೮) ತಿರುನ್ದಕ್ಕಣ್ಡೆನಕ್ಕೊನ್ಱುರೈಯಾಯೊಣ್ ಶಿಱುಪೂವಾಯ್,
ಶೆರುನ್ದಿ ಞಾೞಲ್ಮಕಿೞ್ ಪುನ್ನೈಶೂೞ್ ತಣ್
ತಿರುವಣ್ವಣ್ಡೂರ್,
ಪೆರುನ್ದಣ್ ತಾಮರೈಕ್ಕಣ್ ಪೆರುನೀಣ್ಮುಡಿ
ನಾಲ್ತಡನ್ದೋಳ್,
ಕರುನ್ದಣ್ ಮಾಮುಕಿಲ್ಪೋಲ್ ತಿರುಮೇನಿ
ಯಡಿಕಳೈಯೇ.

ಪ್ರ॥ ಒಣ್-ದರ್ಶನೀಯವಾದ, ಶಿಱು-ಚಿಕ್ಕ, ಪೂವಾಯ್-ಪೂವೈಯೆಂಬ ಪಕ್ಷಿಯೇ !, ಶೆರುನ್ದಿ-ಞಾೞಲ್-ಮಕಿೞ-ಪುನ್ನೈ— ಈ ಹೆಸರುಗಳುಳ್ಳ ನಾನಾವಿಧ ಪುಷ್ಪ ವೃಕ್ಷಗಳಿಂದ, ಶೂೞ-ಪರಿವೃತವಾದ, ತಣ್-ಶ್ರಮಹರವಾದ, ತಿರುವಣ್ ವಣ್ಣೂರ್-ಶ್ರೀ ಮಧುಕೃತ್ಪುರಿಯಲ್ಲಿ, ಪೆರುಮ್-ವಿಶಾಲವಾದ, ತಣ್-ಪ್ರಸನ್ನ ವಾದ, ತಾಮರೈಕ್ಕಣ್-ತಾವರೆಯಂತಿರುವ ಕಣ್ಣುಗಳುಳ್ಳ, ಪೆರು-ದೊಡ್ಡದಾದ, ನೀಣ್ಮುಡಿ - ಉನ್ನತವಾದ ಕಿರೀಟವನ್ನು ಧರಿಸಿರುವ, ತಡಮ್ - ಪುಷ್ಟಿಯಾಗಿ ದುಂಡಾಗಿರುವ, ನಾಲ್‌ತೋಳ್-ನಾಲ್ಕು ತೋಳುಗಳುಳ್ಳ, ಕರುಮ್-ಶ್ಯಾಮಳವಾದ, ತಿಣ್-ಸ್ಥಿರವಾದ, ಮಾಮುಕಿಲ್‌ಪೋಲ್-ಮಹಾಮೇಘದಂತೆ ಇರುವ, ತಿರುಮೇನಿ-ಶರೀರವುಳ್ಳ, ಅಡಿಕಳೈ-ಸ್ವಾಮಿಯನ್ನು, ತಿರುನ್ದಕ್ಕಣ್ಡು-ಚೆನ್ನಾಗಿ ಕಂಡು, ಎನಕ್ಕು-ನನಗೆ, ಒನ್ಱು ಉರೈಯಾಯ್-ಒಂದು ಮಾತನ್ನು ಹೇಳು.

( ಸ-ಗಾ-ರ ॥ )—

ಹೇ ಪೂವೈದ್ವಿಜ! ದಿವ್ಯಪುಷ್ಪಭರಿತೈಃ ಪುನ್ನಾಗವೃಕ್ಷಾದಿಭಿ-
ಶ್ಚಿತ್ರೇ ಶ್ರೀಮಧುಕೃತ್ಪುರೇ ಮಮ ವಿಭೋರ್ನೇತ್ರೇ ವಿಶಾಲೇ ಹರೇಃ ।
ದಿವ್ಯಂ ತನ್ಮಕುಟಂ ಚತುರ್ಭುಜಗಿರೀ ನೀಲಾಮ್ಬುದಶ್ಯಾಮಲಂ
ದೃಷ್ಟ್ವಾ ತಂ ಮಮ ಕಿಞ್ಚಿದುತ್ತರಮಿಹಾನೀಯೋಪಕಾರಂ ಕುರು ॥

ತಾ॥ ದರ್ಶನೀಯವಾದ ಚಿಕ್ಕ ಪೂವೈಪಕ್ಷಿಯೇ ! ನಾನಾವಿಧ ಪುಷ್ಪವೃಕ್ಷಗಳಿಂದ ಭರಿತವಾದ ಶ್ರೀ ಮಧುಕೃತ್ಪುರಿಯಲ್ಲಿ ವಿಶಾಲನೇತ್ರನಾಗಿಯೂ, ದಿವ್ಯ ಕಿರೀಟಧಾರಿಯಾಗಿಯೂ, ಚತುರ್ಬಾಹುಯುಕ್ತನಾಗಿಯೂ, ನೀಲಮೇಘಶ್ಯಾಮನಾಗಿಯೂ, ಇರುವ ಸ್ವಾಮಿಯನ್ನು ಕಂಡುಬಂದು ನನಗೆ ಒಂದುಮಾತನ್ನು ಹೇಳು.

(೯) ಅಡಿಕಳ್ ಕೈತೊೞುದಲರ್‌ಮೇಲಶೈಯುಮನ್ನಙ್ಗಾಳ್,
ವಿಡಿವೈ ಶಙ್ಗೊಲಿಕ್ಕುಮ್ ತಿರುವಣ್‌ವಣ್ಣೂರುಱೈಯುಮ್,
ಕಡಿಯ ಮಾಯನ್ ತನ್ನೈ ಕ್ಕಣ್ಣನೈ ನೆಡುಮಾಲೈ ಕ್ಕಣ್ಡು,
ಕೊಡಿಯ ವಲ್ವಿನೈಯೇನ್ ತಿಱಮ್ ಕೂಱುಮಿನ್ ವೇಱುಕೊಣ್ಡೇ.

ಪ್ರ॥ ಅಲರ್‌ಮೇಲ್ - ಪುಷ್ಪಗಳಮೇಲೆ ಇದ್ದು, ಅಶೈಯುಮ್ - ತೂಗು ಮೆತ್ತೆಯ (ಡೋಲಾಶಯ್ಯೆಯ) ಮೇಲೆ ಇರುವವರಂತೆ ಗಾಳಿಗೆ ಆಡುತ್ತಿರುವ, ಅನ್ನಙ್ಗಾಳ್ - ಹಂಸಪಕ್ಷಿಗಳಿರಾ !, ವಿಡಿವೈ-ಬೆಳಗಾಗುವುದಕ್ಕೆ ಪ್ರಕಾಶಕವಾದ, ಶಙ್ಗು-ಶಂಖವು, ಒಲಿಕ್ಕುಮ್ - ಧ್ವನಿಮಾಡುತ್ತಿರುವ, ತಿರುವಣ್‌ವಣ್ಣೂರ್-ಶ್ರೀ

ಮಧುಕೃತ್ಪುರಿಯಲ್ಲಿ, ಉತ್ತ್ರಾಯುಮ್ – ನಿತ್ಯವಾಸಮಾಡುವ, ಕಡಿಯ–ಹಿಡಿದ ಕಾರ್ಯವನ್ನು ಬಿಡದೆಸಾಧಿಸುವ ತೀವ್ರಬುದ್ಧಿಯುಳ್ಳ, ಮಾಯರ್ತನ್ನೈ–ಶತ್ರುಗಳನ್ನು ವಶೀಕರಿಸುವ ಅದ್ಭುತಚೇಷ್ಟಿತನಾದ, ಕಣ್ಣನೈ–ಶ್ರೀಕೃಷ್ಣನನ್ನು, ನೆಡುಮಾಲೈ–ಆಶ್ರಿತ ವ್ಯಾಮೋಹವುಳ್ಳ, ಸ್ವಾಮಿಯನ್ನು, ಕಣ್ಣು – ಕಂಡು, ಅಡಿಕಳ್–ಅವನ ಪಾದಗಳನ್ನು ಕುರಿತು, ಕೈ ತೊೞುದು–ಅಂಜಲಿಮಾಡಿ ಸೇವಿಸಿ, ಕೊಡಿಯವಲ್ ವಿನೈಯೇನ್-ಕ್ರೂರವಾದ ಮಹಾಪಾಪಗಳನ್ನು ಮಾಡಿದ ನನ್ನ, ತಿಱಮ್-ಪಕ್ಷವಾಗಿ, ವೇಱುಕೊಣ್ಡು-(ನೀವು) ಅವನ ಏಕಾನ್ತಸಮಯವನ್ನು ನೋಡಿ, ಕೂಱುಮಿನ್–ಅವನೊಡನೆ ಸಂಭಾಷಣಮಾಡಿರಿ.

( ಸ–ಗಾ–ರ ॥ )—

ಹೇ ಹಂಸಾಃ ! ಕುಸುಮೇಶಯಾಃ ಪ್ರಭುಮಮುಂ ಕೃಷ್ಣಂ ಹರಿಂ ಮಾಯಿನಂ
ದೃಷ್ಟ್ವಾ ಶ್ರೀಮಧುಕೃತ್ಪುರೇ ಭೃಶಮುಷಶ್ಶಙ್ಖಾರವೋದ್ಘೋಷಿತೇ |
ಶ್ರೀಶಂ ತಂ ವಿನಯಾತ್ಪ್ರಣಮ್ಯ ನಿತರಾಂ ಪಾಪಾಕುಲಾಂ ಮಾಂ ಪ್ರತಿ
ಬ್ರೂತೋಕ್ತಿಂ ಕೃಪಯಾ ತು ಯೂಯಮುಚಿತಾನೇಕಾನ್ತಕಾಲೇ ಹರೇಃ ||

ತಾ॥ ಪುಷ್ಪಗಳಮೇಲೆ (ಸ್ತ್ರೀ ಪಕ್ಷಿಗಳೊಡನೆ) ಕೂಡಿ ಇದ್ದು ತೂಗಿ ಆಡುವ ಹಂಸಪಕ್ಷಿಗಳೇ ! ಪ್ರಾತಃಕಾಲದ ಶಂಖಧ್ವನಿಯುಳ್ಳ ಶ್ರೀ ಮಧುಕೃತ್ಪುರಿಯಲ್ಲಿ ನಿತ್ಯವಾಸಮಾಡುವ ಮಾಯಾಚೇಷ್ಟಿತನಾದ ಶ್ರೀಕೃಷ್ಣರೂಪಿಯಾದ ನಮ್ಮ ಸ್ವಾಮಿಯನ್ನು ನೀವು ಕಂಡು ಅವನ ಪಾದಗಳಿಗೆ ಅಂಜಲಿಮಾಡಿ, ಪಾಪಿನಿಯಾದ ನನ್ನ ಪಕ್ಷವಾಗಿ ಅವನ ಏಕಾನ್ತಸಮಯದಲ್ಲಿ ಒಂದು ಮಾತನ್ನು ಹೇಳಿರಿ.

(೧೦) ವೇಱುಕೊಣ್ಡುಮ್ಮೈ ಯಾನಿರನ್ದೇನ್ ವೆಱಿ ವಣ್ಡಿನಙ್ಗಾಳ್,
ತೇಱುನೀರ್ ಪಮ್ಬೈವಡಪಾಲೈ ತ್ತಿರುವಣ್ವಣ್ಡೂರ್,
ಮಾಱಿಲ್ ಪೋರರಕ್ಕನ್ ಮದಿಳ್‌ನೀರೆೞ ಚ್ಚೆಱ್ಱುಕನ್ದ,
ಏಱು ಶೇವಕನಾರ್‌ಕ್ಕೆನ್ನೈಯುಮುಳಳೆನ್ಮಿನ್ಕಳೇ.

ಪ್ರ॥ ವೆಱಿ-ಪರಿಮಳಭರಿತವಾದ (ಪುಷ್ಪಗಳಮೇಲಿರುವ), ವಣ್ಡು ಇನಙ್ಗಾಳ್-ಭ್ರಮರಸಮೂಹಗಳೇ ! ಉಮ್ಮೈ–ನಿಮ್ಮನ್ನು, ವೇಱುಕೊಣ್ಡು–ಪ್ರತ್ಯೇಕವಾಗಿ ಭಾವಿಸಿ ಗೌರವದಿಂದ, ಯಾನ್–ನಾನು, ಇರನ್ದೇನ್-ಪ್ರಾರ್ಥಿಸಿದೆನು. (ವಿರಜಾ ನದಿಗೆ ಉತ್ತರದಲ್ಲಿರುವ ಪರಮಪದದಂತೆ), ತೇಱುನೀರ್-ನಿರ್ಮಲವಾದ ತೀರ್ಥೋದ

ದಶಕವುಳ್ಳ, ಪಮ್ಪೈ-ಪಂಪಾನದಿಯ (ಸರೋವರದ), ವಡಪಾಲ್ಕೈ-ಉತ್ತರ ತೀರದಲ್ಲಿರುವ, ತಿರುವಣ್ವಣ್ಡೂರ್ - ಶ್ರೀ ಮಧುಕೃತ್ಪುರಿಯಲ್ಲಿರುವ, ಮಾಱು ಇಲ್-ಅಸದೃಶವಾದ, ಪೋರ್ - ಯುದ್ಧವುಳ್ಳ, ಅರಕ್ಕರ್ - ಕ್ರೂರರಾಕ್ಷಸನಾದ ರಾವಣನ, ಮದಿಳ್-ಪ್ರಾಕಾರವೆಲ್ಲಾ, ನೀಱಾಗ-ಧೂಳಿಧೂಳಿಯಾಗಿ ನಷ್ಟವಾಗುವಂತೆ, ಶೆಱ್ಱು-ನಾಶಪಡಿಸಿ, ಉಕನ್ದ-ಆದರಿಂದ ಸನ್ತುಷ್ಟನಾದ, ಏಱು-ಗುಣ ಸಮೃದ್ಧಿಯುಳ್ಳ, ಶೇವಕನಾರ್ಕ್ಕು - ಪರಾಕ್ರಮಶಾಲಿಯಾದ ಸ್ವಾಮಿಗೆ, ಎನ್ನೈಯುಮ್-ನನ್ನನ್ನೂ, ಉಳಳ್ - (ಇವಳೂ ಒಬ್ಬಳು ಸೀತಾದೇವಿಯಂತೆ ತಮಗೆ ರಕ್ಷ್ಯೆಯಾದವಳು) ಇದಾಳ್-ಎಂದು, ಎಮ್ಮಿಱೈಕಳ್-ಹೇಳಿರಿ.

( ಸ-ಗಾ-ರ || )—

ಯೂಯಂ ಭೋ ಮಧುಪಾಸ್ಸುಗನ್ಧಭರಿತಾಃ ಕಿಞ್ಚಿತ್ತು ಯಾಚೇ ಸ್ವಯಂ
ಯುಷ್ಮಾನೇವ ವಿಶೇಷತಸ್ಸುವಿಮಲೇ ಪಮ್ಪಾಜಲೋದಕ್ತಟೇ |
ರಮ್ಯೇ ಶ್ರೀಮಧುಕೃತ್ಪುರೇ ಮಮ ವಿಭುಂ ದೃಷ್ಟ್ವಾ ಚ ರಕ್ಷಃಪುರೀ-
ಧ್ವಂಸೋತ್ಸಾಹಿನಮಚ್ಯುತಂ ವದತ ಮಾಂ ಚೈಕಾಮಿವಾಂ ಜೀವಿತಾಮ್ ||

ತಾ|| ಪರಿಮಳಭರಿತವಾದ ಭ್ರಮರಸಮೂಹಗಳೇ! ನಿಮ್ಮನ್ನು ನಾನು ಗೌರವಿಸಿ ಪ್ರತ್ಯೇಕವಾಗಿ ಪ್ರಾರ್ಥಿಸಿ ಇರುತ್ತೇನೆ. (ವಿರಜಾನದಿಗೆ ಉತ್ತರದಲ್ಲಿರುವ ಪರಮಪದದಂತೆ) ಪಂಪಾಸರೋವರಕ್ಕೆ ಉತ್ತರದಲ್ಲಿರುವ ಶ್ರೀ ಮಧುಕೃತ್ಪುರಿಯಲ್ಲಿರುವ-ಲಂಕಾಪ್ರಾಕಾರನಾಶಕನಾದ ವೀರಾಗ್ರಗಣ್ಯನಾದ ಸ್ವಾಮಿಗೆ ನಾನೂ ಒಬ್ಬಳು (ಸೀತಾದೇವಿಯಂತೆ) ರಕ್ಷಣೀಯೆ ಯಾದವಳು (ಅದ್ಯಾಪಿ) ಇದೇನೆಂದು ನೀವು ತಿಳಿಸಿರಿ. (ಆ ಸ್ವಾಮಿಯ ರಕ್ಷಣಕಾರ್ಯವು ಇನ್ನೂ ಅವಶಿಷ್ಟವಾಗಿದೆಯೆಂದು ತಿಳಿಸಿರಿ—ಎಂದು ಭಾವವು.)

(೧೧) ಮಿನ್ಕೊಳ್ ಶೇರ್ ಪುರಿನೂಲ್ ಕುಱಳಾಯಕಲ್
ಞಾಲಙ್ಕೊಣ್ಡ,
ವನ್ಕಳ್ವನಡಿಮೇಲ್ ಕುರುಕೂರ್ ಚ್ಚಡಕೋಪನ್ ಶೊನ್ನ,
ಪಣ್ಕೊಳಾಯಿರತ್ತಿವ್ವೈಪತ್ತುಮ್ ತಿರುವಣ್ವಣ್ಡೂರ್ಕ್ಕು,
ಇನ್ಕೊಳ್ ಪಾಡವಲ್ಲಾರ್ ಮದನರ್ ಮಿನ್ನಿಡೈಯವರ್ಕ್ಕೇ.

ಪ್ರ|| ಮಿೞ್-ಕಾನ್ತಿಯನ್ನು, ಕೊಳ್-ಪಡೆದಿರುವ, ಶೇರ್-ಶರೀರದಲ್ಲಿ ಅನುರೂಪವಾಗಿ ಸೇರಿರುವ, ಪುರಿನೂಲ್ - ಯಜ್ಞೋಪವೀತವುಳ್ಳ, ಕುಱಳಾಯ್-ವಾಮನನಾಗಿ, ಅಕಲ್-ವಿಶಾಲವಾದ, ಞಾಲಮ್- ಭೂಮಿಯನ್ನೆಲ್ಲಾ, ಕೊಣ್ಡ-(ತನ್ನ ಪಾದದಿಂದ) ಅಳೆದುಕೊಂಡ, ವಞ್ ಕಳ್ವನ್-ಪ್ರಬಲವಂಚಕನಾದ ಸ್ವಾಮಿಯ, ಅಡಿಮೇಲ್-ಪಾದಗಳ ವಿಷಯವಾಗಿ, ಕುರುಕೂರ್ ಶಡಕೋಪನ್-ಕುರುಕಾಪುರಿಯ ಶ್ರೀ ಶಠಾರಿಮುನಿಯು, ಶೊನ್ನ-ಹೇಳಿದ, ಪಣ್ಕೊಳ್-ಗಾನರಸವುಳ್ಳ, ಆಯಿರತ್ತುಳ್-ಸಹಸ್ರ ಪದ್ಯಮಾಲೆಯೊಳು, ತಿರುವಣ್ವಣ್ಡೂರ್ಕ್ಕು- ಶ್ರೀ ಮಧುಕೃತ್ಪುರಿಗೆ ಸೇರಿದ, ಇನ್ಕೊಳ್-ಭೋಗ್ಯತೆಯುಳ್ಳ, ಪಾಡಲ್-ಗಾನರೂಪವಾದ ಪದ್ಯಾವಳಿಯಾದ, ಇವೈಪತ್ತುಮ್-ಈ ಹತ್ತು ಪದ್ಯಗಳನ್ನು, ವಲ್ಲಾರ್-ಬಲ್ಲವರು, ಮಿನ್ ಇಡೈಯವರ್ಕ್ಕೇ - ಮಿಂಚಿನಂತೆ ಹೊಳೆಯುವ ಮಧ್ಯವುಳ್ಳ ಕಾಮಿನಿಗಳಿಗೆ, ಮದನರ್-ಕಾಮುಕರಂತೆ ಶ್ರೀ ಭಗವದ್ಭಾಗವತರಿಗೆ ಭೋಗ್ಯರಾಗುವರು.

( ಸ-ಗಾ-ರ || )—

ಶ್ರೀಶಂ ವಾಮನಮಚ್ಯುತಂ ಸುವಿಲಸದ್ಯಜ್ಞೋಪವೀತಾಞ್ಚಿತಂ
ಭೂಯಾಚ್ಞಾಂ ಪ್ರತಿ ವಞ್ಚಕಂ ಶಠರಿಪುಸ್ತತ್ಪಾದಸದ್ಭಕ್ತಿಶ್ರಯಃ |
ಸ್ತೋತುಂ ಶ್ರೀಕುರುಕಾಪುರಪ್ರಭುರಸೌ ಸಾಹಸ್ರಮಾಹಾತ್ರ ಚ
ಜ್ಞಾತ್ವೇದಂ ಮಧುಕೃತ್ಪುರಾನುದಶಕಂ ಧನ್ಯಾ ದಿವಿ ಸ್ಯುರ್ಜನಾಃ ||

ತಾ|| ದಿವ್ಯಕಾನ್ತಿಯುಳ್ಳ ಅನುರೂಪವಾದ ಯಜ್ಞೋಪವೀತವನ್ನು ಧರಿಸಿರುವ, ವಾಮನಾವತಾರವಾಗಿ ಭೂಮಿಯನ್ನೆಲ್ಲಾ ಅಳೆದುಕೊಂಡ ಮಹಾ ವಂಚಕನಾದ ಸ್ವಾಮಿಯ ಪಾದಗಳಮೇಲೆ ಶ್ರೀ ಕುರುಕಾಪುರಿಯ ಶಠಾರಿಮುನಿಯಿಂದ ವಿರಚಿತವಾದ ಸಹಸ್ರಪದ್ಯಮಾಲೆಯೊಳು ಶ್ರೀಮಧುಕೃತ್ಪುರಿಗೆ ಸೇರಿದ ಭೋಗ್ಯವಾದ ಈ ದಶಕವನ್ನು ಬಲ್ಲವರು ದಿವ್ಯಸೂರಿಗಳಿಗೂ ಶ್ರೀ ವೈಕುಣ್ಠನಾಥನಿಗೂ ಭೋಗ್ಯತಮರಾಗುವರು.

( ದ್ರು ಉ-ಸಂ || )—

ಆದ್ಯೇ ತು ಷಷ್ಠಶತಕಸ್ಯ ಮುನಿಸ್ತದಾತೋರ್
ನಾರೀಸಮಾಧಿಮಧಿಗಮ್ಯ ನಿಜಾಮವಸ್ಥಾಮ್ |
ಅರ್ಚಾಹರಿಂ ಕಮಪಿ ಪಕ್ಷಿಭಿರನ್ತಿಕಸ್ಥೈ-
ರಾಪನ್ನರಕ್ಷಣಸದೀಕ್ಷಮಬೋಧಯತ್ಸಃ ||

( ದ್ರ-ಉ-ತಾ-ರ || )—

ಚಕ್ರಿತ್ವಾತ್ ಸ್ವಾಮಿಭಾವಾದ್ವಿಪದಿ ಸವಿತಯಾ ಬಿಮ್ಬದೃಶ್ಯಾಧರತ್ವಾ-
ದಬ್ಧಿಶ್ಯಾಮಾತ್ಮಕಾನ್ತ್ಯಾ ಧೃತತುಲಸಿತಯಾ ನಿರ್ಜರಾಧೀಶಭಾವಾತ್ |
ರಕ್ತಾಭಾಸ್ಯಾಂಘ್ರಿಭಾವಾತ್ ಪೃಥುಮಕುಟತಯಾ ಒಽಶ್ಚರ್ಯಚರ್ಯಾವಿಶೇಷೈ-
ರ್ಲಂಕಾಧ್ವಂಸಾಚ್ಚ ಕೃಷ್ಣಂ ಶಠಜಿದಕಥಯದ್ದೈಶಿಕದ್ವಾರಗಮ್ಯಾಮ್ ||

(ಈ ಪ್ರಥಮದಶಕದ ಸಾರಾಂಶ)—

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ತಿರುವಣ್‌ವಣ್ಡೂರ್ (ಶ್ರೀಮಧುಕೃತ್ಪುರೀ)—ಎಂಬ ದಿವ್ಯದೇಶದ ಸ್ವಾಮಿಯ ಸನ್ನಿಧಿಗೆ – ಕುರುಕು – ಕರುನಾರಾಯ್ – ಪಕ್ಷಿಸಮೂಹ-ಹಂಸ-ಕೋಕಿಲೆ-ಗಿಣಿ-ಪೂವೈ-ಭ್ರಮರ—ಇತ್ಯಾದಿಗಳನ್ನು ದೂತಕೃತ್ಯದಲ್ಲಿ ಪ್ರೇರಿಸಿ, ತನ್ನ ಪಕ್ಷವಾಗಿ ಅವನಲ್ಲಿ ಒಂದು ಮಾತನ್ನು ಹೇಳಿ ತನ್ನನ್ನೂ ಅವನು ರಕ್ಷಿಸುವಂತೆ ಮಾಡಬೇಕೆಂದು ಪ್ರಾರ್ಥಿಸಿ ಇರುತ್ತಾರೆ.

---

ಶ್ರೀಃ

## ಷಷ್ಠ ಶತಕದಲ್ಲಿ—ದ್ವಿತೀಯದಶಕ.

(ಮಿನ್ನಿಡೈಮಡವಾರ್‌ಕಳ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಪಡೆದು ನಾಯಕನು ಬರದೆ ವಿಲಂಬಮಾಡಿದುದಕ್ಕಾಗಿ ಪ್ರಣಯಕೋಪದಿಂದ ನಾಯಕಿಯು ಅವನನ್ನು ನಿರಾಕರಿಸುವ ಭಾವವನ್ನು ವರ್ಣಿಸುತ್ತಾರೆ.)

---

(೧) ಮಿನ್ನಿಡೈಮಡವಾರ್‌ಕಳ್ ನಿನ್ನರುಳ್ ಶೂಡುವಾರ್
ಮುನ್ಪು ನಾನದಞ್ಜುವನ್,
ಮನ್ನುಡೈಯಿಲಙ್ಗೈ ಅರಣ್‌ಕಾಯ್‌ನ್ದ ಮಾಯವನೇ,
ಉನ್ನುಡೈಯ ಶುಣ್ಡಾಯಮ್ ನಾನಱಿವನಿನಿಯದುಕೊಣ್ಡು
ಶೆಯ್ವದೆನ್,
ಎನ್ನುಡೈಯ ಪನ್ದುಮ್ ಕ಴ಲುಮ್ ತನ್ದು ಪೋಕು ನಮ್ಬೀ.

ಪ್ರ॥ ಮಿನ್ – ಮಿಂಚಿನಹಾಗೆ ಹೊಳೆಯುವ, ಇಡೈ – ಮಧ್ಯಪ್ರದೇಶವುಳ್ಳ, ಮಡವಾರ್‌ಕಳ್ – ಸ್ತ್ರೀಯರ (ಸ್ತ್ರೀಗುಣಪೂರ್ತಿಯುಳ್ಳವರ), ನಿನ್ ಅರುಳ್–ನಿನ್ನ ಕೃಪೆಯನ್ನು, ಶೂಡುವಾರ್–ಶಿರಸಾವಹಿಸಿರುವವರ, ಮುನ್ಬು–ಮುಂದುಗಡೆ, ನಾನ್–ನಾನು, ಅದು-ನಿನ್ನ ವಿಷಯದಲ್ಲಿ ಅವರು ಮಾಡುವ ಕೋಪವನ್ನು ಕುರಿತು, ಅಞ್ಜುವನ್–ಭಯಪಡುವೆನು. ಮನ್ನುಡೈ ಇಲಙ್ಗೈ – ಐಶ್ವರ್ಯ ಸಮೃದ್ಧಿಯುಳ್ಳ ಲಂಕಾಪುರಿಯ, ಅರಣ್‌ಕಾಯ್‌ನ್ದ–ಪ್ರಾಕಾರವನ್ನು ನಾಶಪಡಿಸಿದ, ಮಾಯವನೇ-ಕೃತ್ರಿಮಚೇಷ್ಟಿತನೇ !, (ಅದು), ಉನ್ನುಡೈಯ–ನಿನ್ನ, ಶುಣ್ಡಾಯಮ್–ಸ್ವಾರ್ಥಪರತ್ವವು, (ಎಂದು) ನಾನರಿವನ್–ನಾನು ತಿಳಿದಿರುತ್ತೇನೆ. ಇನಿ-ಇನ್ನು ಮೇಲೆ, ಅದುಕೊಣ್ಡು ಶೆಯ್ವದೆನ್-ಅದರ ವಿಚಾರದಲ್ಲಿ ಕರ್ತವ್ಯಾಂಶವುಂಟೋ? (ಇಲ್ಲವಷ್ಟೆ !) ನಮ್ಬೀ-ಪರಿಪೂರ್ಣನೇ!, ಎನ್ನುಡೈಯ–ನನ್ನ, ಪನ್ದುಮ್–ಚೆಂಡನ್ನೂ, ಕೞಲುಮ್–(ಐದು) ಗೆಜ್ಜೆಗಗಳನ್ನೂ, ತನ್ದು–ತಂದುಕೊಟ್ಟು, ಪೋಕು–ಹೋಗು.

( ಸ-ಗಾ-ರ ॥ )—

ಅಗ್ರೇ ತೇ ರಮಣೀಜನಸ್ಯ ತು ತಟಿನ್ಮಧ್ಯಸ್ಯ ಚ ತ್ವತ್ಪ್ರಿಯ–
ಸ್ಯೈವಂ ದುಷ್ಟವಿಚೇಷ್ಟಿತಂ ತವ ಕಥಂ ವಕ್ಷ್ಯಾಮೀತಿ ಶಙ್ಕಾಽಸ್ತಿ ಮೇ ।
ಲಙ್ಕಾವಪ್ರವಿನಾಶಕೋಽಸಿ ಭಗವನ್! ಮಾಯೀ ಭವಾನ್! ವೇದ್ಮ್ಯಹಂ
ಚೇಷ್ಟಾಂ ತೇ ವ್ರಜ ಕನ್ತುಕಂ ಮಮ ವಿಭೋ ! ದತ್ವಾಽದ್ಯ
ಚಾಕ್ಷಾನಪಿ ॥

ತಾ॥ ಮಿಂಚಿನಹಾಗೆ ಹೊಳೆಯುವ ಮಧ್ಯವುಳ್ಳ ನಿನ್ನ ಕೃಪೆಗೆ ಪಾತ್ರರಾದ ಸ್ತ್ರೀಜನರ ಮುಂದುಗಡೆ ನಾನು ನಿನ್ನ ಈ ದುಶ್ಚರಿತವನ್ನು ಹೇಳಲು ಭಯಪಡುತ್ತೇನೆ. ಲಂಕಾಪುರೀನಾಶಕನಾದ ಮಾಯಾಚೇಷ್ಟಿತನೇ ! ಅದೆಲ್ಲಾ (ನೀನು ಮಾಡಿದ ಕೃತ್ಯವೆಲ್ಲಾ) ನಿನ್ನ ಸ್ವಾರ್ಥಪರತ್ವವೆಂದೇ ನಾನು ತಿಳಿದಿರುವೆನು. ಇನ್ನುಮೇಲೆ ಅದನ್ನೆಲ್ಲಾ ಹೇಳಿ ಏನುಫಲ? ನಾನು ಏನುಮಾಡಬಲ್ಲೆನು? ನನ್ನಂತಹ ಅನೇಕ ಸ್ತ್ರೀ ಜನರೊಡನೆ ಭೋಗಿಸುವ ಭಾಗ್ಯದಿಂದ ಪರಿಪೂರ್ಣನಾದವನೇ ! ನೀನು ನನ್ನ ಚೆಂಡನ್ನೂ ಕೞಲನ್ನೂ ತಂದುಕೊಟ್ಟು ನಿನ್ನ ಪ್ರಿಯೆಗಳಕಡೆಗೆ ಹೋಗು—ಎಂದು ಪ್ರಣಯರೋಷದಿಂದ ನಾಯಕಿಯು ಹೇಳುತ್ತಾಳೆ. (ಮೇಲಿನ ಶ್ಲೋಕದಲ್ಲಿ—"ಅಕ್ಷಾನ್"—ಎಂಬ ಪದವು, ಕೞಲ್ ಎಂಬುದಕ್ಕೆ ಪ್ರತಿಯಾಗಿ ಪ್ರಯೋಗಿಸಲ್ಪಟ್ಟಿದೆ.)

(೨) ಪೋಕುನಮ್ಬೀ ! ಉನ್ ತಾಮರೈಪ್ಪುರೈ ಕಣ್ಣಿಣೈಯುಮ್
ಶೆವ್ವಾಯ್ ಮುಱುವಲುಮ್,
ಆಕುಲಙ್ಗಳ್ ಶೆಯ್ಯ ಅೞಿದಱ್ಕೆ ನೋಱ್ಱೋಮೇಯಾಮ್,
ತೋಕೈಮಾಮಯಿಲಾರ್ಗಳ್ ನಿನ್ನರುಳ್ ಶೂಡುವಾರ್
ಶೆವಿಯೋಶೈವೈತ್ತೆೞ,
ಆಕಳ್ ಪೋಕವಿಟ್ಟು ಕ್ಕುೞಲೂದು ಪೋಯಿರುನ್ದೇ.

ಪ್ರ|| ನಮ್ಬೀ-ಪೂರ್ಣನೇ ! ಪೋಕು-ಹೋಗು, ಉನ್-ನಿನ್ನ, ತಾಮರೈಪುರೈ-ತಾವರೆಯಹಾಗೆ ದರ್ಶನೀಯವಾದ, ಕಣ್ಣಿಣೈಯುಮ್ - ನೇತ್ರಯುಗ್ಮವನ್ನೂ, ಶೆವ್ವಾಯ್-ಕೆಂಪಾದ ವಕ್ತ್ರದ, ಮುಱುವಲುಮ್-ಮನ್ದಹಾಸವನ್ನೂ, ಯಾಮ್-ನಾವು, (ಕಂಡು) ಆಕುಲಙ್ಗಳ್ ಸಂಭ್ರಮ ಘೋಷಗಳನ್ನು, ಶೆಯ್ಯ-ಮಾಡಲು, ಅೞಿದಱ್ಕು - ಅವಕಾಶವಿಲ್ಲದೆ ನಷ್ಟರಾಗುವುದಕ್ಕೆ, ನೋಱ್ಱೋಮೇ-ವ್ರತಾಚರಣವಂ ಮಾಡಿದವರಲ್ಲವೇ ? ತೋಕೈವಿರಿತ್ತ - ಗರಿಯನ್ನು ಬಿಚ್ಚಿದ, ಮಾಮಯಿಲಾರ್ಕಳ್-ದೊಡ್ಡ ನವಿಲುಗಳಂತೆ ವಿಸ್ತೀರ್ಣವಾದ ಕೇಶವುಳ್ಳ ಸ್ತ್ರೀಯರು, ನಿನ್ ಅರುಳ್-ನಿನ್ನ ಕೃಪೆಯನ್ನು, ಶೂಡುವಾರ್-ಶಿರಸಾವಹಿಸುವರಲ್ಲವೇ ? ಓಶೈ-ಧ್ವನಿಯನ್ನು, ಶೆವಿವೈತ್ತು-ಕಿವಿಯಲ್ಲಿ ಕೇಳಿ, ಎೞ-ಎದ್ದು ಬರುವಂತೆ, ಆಕಳ್-ಪಶುಗಳನ್ನು, ಪೋಕವಿಟ್ಟು-ದೂರದಲ್ಲಿ ಬಿಟ್ಟು, ಪೋಯ್ ಇರುನ್ದು-ಹೋಗಿ ಇದ್ದು, ಕುೞಲೈ ಊದು-ಕೊಳಲನ್ನು ಊದು.

( ಸ-ಗಾ-ರ || )—

ಹೇ ಪೂರ್ಣ ! ವ್ರಜ ದೂರತಸ್ತ್ವಮಧುನಾ ತೇ ನೇತ್ರಪದ್ಮದ್ವಯಂ
ರಮ್ಯಂ ಸ್ಮೇರಮುಖಂ ವಯಂ ನ ಹಿ ಹರೇ ! ಧನ್ಯಾಸ್ತ್ವಯಂ
ವೀಕ್ಷಿತುಮ್ |
ಪ್ರೇಯಸ್ಯಸ್ತವ ಸನ್ತಿ ಭಾಗ್ಯಭರಿತಾಸ್ತಾಪಿಂಛಕೇಶ್ಯೋ ಽನ್ಯತ-
ಸ್ತಾಸಾನ್ತು ಶ್ರುತಿಗೋಚರಂ ಪಶುಗಣೈಸ್ತ್ವಂ ವೇಣುನಾದಂ ಕುರು ||

ತಾ|| ನಮ್ಬೀ ! (ಪೂರ್ಣನೇ!) ಹೋಗು. ನಿನ್ನ ತಾವರೆಯಂತಿರುವ ನೇತ್ರಯುಗ್ಮವನ್ನೂ ಬಿಂಬಾಧರದ ಮನ್ದಹಾಸವನ್ನೂ ನಾವು ಕಂಡು ಸಂಭ್ರಮೋದ್ಘೋಷವನ್ನು ಮಾಡುವ ಭಾಗ್ಯವು ನಮಗೆ ಇಲ್ಲವಷ್ಟೆ! ನವಿಲುಗಳ ಬಿಚ್ಚಿದ ಗರಿಯಂತೆ ಕೇಶಗಳುಳ್ಳ ಸ್ತ್ರೀ ಜನರು ನಿನ್ನ ಕೃಪೆಗೆ ಪಾತ್ರರಲ್ಲವೆ! (ಅವರ

ಸಮೀಪಕ್ಕೆ ಹೋಗು) ಪಶುಗಳನ್ನು ದೂರದಲ್ಲಿ ಮೇಯುವುದಕ್ಕೆ ಬಿಟ್ಟು ಅವುಗಳು ನಿನ್ನ ವೇಣುನಾದವನ್ನು ಕೇಳಿ ಓಡಿಬರುವಂತೆ ಕೊಳಲನ್ನು ಊದು.

(೩) ಪೋ(ಯಿರುನ್ದು ನಿ‌ನ್ ಪುಳ್ಳುವಮೊಱಿಯಾದವರ್‌ಕ್ಕು ಉರೈ
ನಮ್ಬಾ, ನಿನ್ ಶೆಯ್ಯ
ವಾಯಿರುಮ್‌ಕನಿಯುಮ್ ಕಣ್‌ಕಳುಮ್ ವಿಪರೀತಮಿನ್ನಾಳ್,
ವೇಯಿರುಮ್ ತಡಮ್‌ತೋಳಿನಾರಿತ್ತಿರುವರುಳ್
ಪೆಱುವಾರ್ ಯವರ್‌ಕೊಲ್,
ಮಾಯಿರುಮ್ ಕಡಲೈಕ್ಕಡೈನ್ದ ಪೆರುಮಾನಾಲೇ.

ಪ್ರ|| ನಮ್ಬಾ-ಪೂರ್ಣನೇ !, ಪೋಯ್-ಹೋಗಿ, ಇರುನ್ದು-(ನಿನ್ನ ಪ್ರಿಯೆಗಳ ಸಮೀಪದಲ್ಲಿ) ಇದ್ದು, ನಿನ್-ನಿನ್ನ, ಪುಳ್ಳುವಮ್-ಕಳ್ಳತನವನ್ನು, ಅಱಿಯಾದವರ್‌ಕ್ಕು-ತಿಳಿಯದವರಿಗೆ, ಉರೈ-ಹೇಳು. ನಿನ್-ನಿನ್ನ, ಶೆಯ್ಯವಾಯ್-ಕೆಂಪಾದ ವಕ್ತ್ರವೆಂಬ, ಇರುಕನಿಯುಮ್ - ಶ್ಲಾಘ್ಯವಾದ (ತೊಂಡೆಯ) ಹಣ್ಣೂ, ಕಣ್‌ಕಳುಮ್-ನೇತ್ರಗಳೂ, ಇನ್ನಾಳ್-ಈಗ, ವಿಪರೀತಮ್-ಬಾಧಕವಾಗಿವೆ. ಮಾ-ಅಗಾಧವಾದ, ಇರುಮ್ - ವಿಸ್ತೀರ್ಣವಾದ, ಕಡಲೈ-ಸಮುದ್ರವನ್ನು, ಕಡೈನ್ದ-ಕಡೆದ, ಪೆರುಮಾನಾಲೇ - ಸ್ವಾಮಿಯಿಂದ, ಇತ್ತಿರುವರುಳ್ - ಈ ಶ್ಲಾಘ್ಯವಾದ ಕೃಪೆಯನ್ನು, ಪೆಱುವಾರ್-ಹೊಂದಿರುವವರಾದ, ವೇಯ್-ಬೊಂಬಿನಂತೆ, ಇರು-ಗುಂಡಾಗಿ ಪುಷ್ಟವಾದ, ತಡ - ದೀರ್ಘವಾದ, ತೋಳಿನಾರ್ - ಭುಜಗಳುಳ್ಳ, ಸ್ತ್ರೀಯರು, ಯವರ್‌ಕೊಲ್ - ಯಾರು ? (ಅವರುಗಳನ್ನು ಕಂಡರೆ ನಾನೂ ಅವರನ್ನು ಶ್ಲಾಘಿಸಬಹುದೆಂದು ಪ್ರಣಯರೋಷದಿಂದ ಹೇಳುತ್ತಾಳೆ.)

( ಸ-ಗಾ-ರ || )—

ಭೋ ಭೋಃ ! ಕೃತ್ರಿಮಪೂರ್ಣ ! ಯಾಹಿ ವದ ತೇ ವಾಚಂ ಹರೇ !
ಕೃತ್ರಿಮಾಂ
ತ್ವನ್ಮಾಯಾದ್ಯನಭಿಜ್ಞಸನ್ನಿಧಿತಲೇ ಮೇ ಭಾತಿ ಸರ್ವಂ ಚ ತೇ |
ಸೌನ್ದರ್ಯಂ ಪ್ರತಿಕೂಲಮೇವ ನಯನೇ ಬಿಮ್ಬಾಧರೇ ಶ್ರೀಪತೇ !
ವಿಸ್ತೀರ್ಣಾಮ್ಬುಧಿಮನ್ಥ ! ಸುನ್ದರಭುಜಾ ನಾರ್ಯಃ ಪ್ರಿಯಾಸ್ತೇಽದ್ಯ ಕಾಃ? ||

ತಾ|| ಪೂರ್ಣನೇ ! ನೀನು ಹೋಗಿ ನಿನ್ನ ಪ್ರಿಯೆಗಳ ಸಮೀಪದಲ್ಲಿದ್ದು ನಿನ್ನ ಕಳ್ಳತನವನ್ನು ತಿಳಿಯದವರಿಗೆ ಹೇಳು. ನಿನ್ನ ಕೆಂಪಾದ ವಕ್ತ್ರವೆಂಬ ಬಿಂಬ

ಫಲವೂ, ನೇತ್ರಪದ್ಮಗಳೂ ಈಗ ನಮಗೆ ಬಾಧಕವಾಗಿವೆ. ಸಮುದ್ರಮಥನವಂ ಮಾಡಿದ ಸ್ವಾಮಿಯಾದ ನಿನ್ನ ಕೃಪೆಗೆ ಪಾತ್ರರಾದ ಸುವೃತ್ತ ಬಾಹುಗಳುಳ್ಳ ಭಾಗ್ಯಶಾಲಿಗಳಾದ ರಮಣೀಜನರು ಯಾರು? (ಅವರನ್ನು ಕಂಡರೆ ನಾನೂ ಅವರನ್ನು ಶ್ಲಾಘಿಸಬಹುದು--ಎಂದು ತನ್ನ ಪ್ರಣಯಕೋಪವಂ ತಿಳಿಸುತ್ತಾಳೆ.)

(೪) ಆಲಿನೀಳಿಲೈ ಯೇಳುಲಕುಮುಣ್ಣಾನ್ನು ನೀ ಕಿಡನ್ದಾಯುನ್
ಮಾಯಙ್ಗಳ್,
ಮೇಲೈವಾನವರುಮ್‌ಅಱಿಯಾರ್ ಇನಿಯೆಮ್ ಪರಮೇ,
ವೇಲಿನೇರ್ ತಡಙ್ಕಣ್ಣಿನಾರ್ ವಿಳೈಯಾಡುಶೂೞಲೈ
ಚೂೞ್ನ್ದುನಿನ್ರು,
ಕಾಲಿಮೇಯ್‌ಕ್ಕ ವಲ್ಲಾಯೆಮ್ಮೈ ನೀ ಕೞರೇಲೇ.

ಪ್ರ|| ಏೞುಲಕುಮ್-ಸಪ್ತಲೋಕಗಳನ್ನೂ, ಉಣ್ಡು-ಭಕ್ಷಿಸಿ, ಆಲ್ಇನಿಇಲೈ-ಒಂದು ಆಲದ (ವಿಶಾಲವಾದ) ಎಲೆಯಲ್ಲಿ, ಅನ್ರು - ಆದಿನ, ನೀ - ನೀನು, ಕಿಡನ್ದಾಯ್-ಮಲಗಿದವನಲ್ಲವೇ?, ಉನ್-ನಿನ್ನ, ಮಾಯಙ್ಗಳ್-ಕೃತ್ರಿಮಚೇಷ್ಟೆ ಗಳನ್ನು, ಮೇಲೈ-ಊರ್ಧ್ವಲೋಕದ (ಅಸ್ಪೃಷ್ಟ ಸಂಸಾರಗನ್ಧರಾದ), ವಾನವರುಮ್-ನಿತ್ಯಸೂರಿಗಳೂ, ಅಱಿಯಾರ್-ತಿಳಿಯಲಾರರು. ಇನಿ-ಹೀಗಿರುವಲ್ಲಿ, ಎಮ್ ಪರಮೇ-ನಾವು ವರ್ಣಿಸಬಲ್ಲೆವೋ? ವೇಲ್ಇನೇರ್-ವೇಲಾಯುಧದಂತೆ ಶತ್ರು ನಾಶಕವಾದ, ತಡಮ್-ವಿಶಾಲವಾದ, ಕಣ್ಣಿನಾರ್-ಕಣ್ಣುಗಳುಳ್ಳ ಸ್ತ್ರೀಯರು, ವಿಳೈಯಾಡು-ಆಟ ಆಡುವ, ಶೂೞಲೈ-ಮರಳುಗುಡ್ಡೆಯನ್ನು, ಶೂೞ್ನ್ದುನಿನ್ರೇ-ಸುತ್ತಿ ನಿಂತೇ, ಕಾಲಿ-ಹಸುಗಳನ್ನು, ಮೇಯ್‌ಕ್ಕವಲ್ಲಾಯ್-ನೀನು ಮೇಯಿಸಬಲ್ಲವನಲ್ಲವೇ?; ಎಮ್ಮೈ-ನಮ್ಮನ್ನು, ಕೞರೇಲ್-ಕೆಣಕಿ ಮಾತನಾಡಬೇಡ.

( ಸ-ಗಾ-ರ || )—

**ಸುಪ್ತಸ್ತ್ವಂ ವಟಪತ್ರಕೇ ಕಿಲ ಪುರಾ ಭುಕ್ತ್ವಾ ಚ ಲೋಕಾನಿಮಾ-**
**ಮಾಯಾಂ ತೇ ನ ವಿದನ್ತಿ ಹನ್ತ! ದಿವಿಷದ್ವರ್ಗಾಶ್ಚ! ವಿದ್ಮಃ ಕಥಮ್?|**
**ಶಕ್ತಸ್ತ್ವಂ ಪಶುಪಾಸನೇ ಹಿ ಲಲನಾಲೀಲಾಸ್ಥಲೇ ಸೈಕತೇ**
**ಕಿಂ ವಾಗ್ಭಿಸ್ತವ ಕೃತ್ರಿಮಾಭಿರಧುನಾ? ಸರ್ವಂ ಚ ವಿದ್ಮೋ ವಯಮ್ ||**

ತಾ|| ಸಪ್ತಲೋಕಗಳನ್ನೂ ಭಕ್ಷಿಸಿ ಒಂದು ಆಲದ ಎಲೆಯಮೇಲೆ ನೀನು ಅಂದು ಮಲಗಿದವನಲ್ಲವೇ ? ನಿನ್ನ ಕೃತ್ರಿಮಚೇಷ್ಟೆಗಳನ್ನು ಊರ್ಧ್ವಲೋಕದ ನಿತ್ಯಸೂರಿಗಳೂ ತಿಳಿಯಲಾರರು. ಹೀಗಿರುವಲ್ಲಿ ನಮಗೆ ವರ್ಣಿಸಲು ಅವು ಶಕ್ಯವೋ ? ಚೇತೋಹರವಾದ ವಿಶಾಲನೇತ್ರಗಳುಳ್ಳ ಸ್ತ್ರೀಜನರು ಆಡುವ ಮರಳು ಗುಡ್ಡೆಯನ್ನು ಸುತ್ತಿ ನಿಂತಲ್ಲವೆ ನೀನು ಹಸುಗಳನ್ನು ಮೇಯಿಸುವವನು ! ನಮ್ಮನ್ನು ಸುಮ್ಮನೆ ಕೆಣಕಬೇಡ (ನಿನ್ನ ರಹಸ್ಯವನ್ನೆಲ್ಲಾ ನಾವು ಉದ್ಘಾಟಿಸಲು ಶಕ್ತರಲ್ಲವಷ್ಟೆ !—ಎಂದು ಭಾವವು.)

(೫) ಕ್ಕುಷಲ್ ನಮ್ಬಿ! ಉನ್ ಕೈತವಮ್ ಮಣ್ಣುಮ್
ವಿಣ್ಣುಮ್ ನನ್ಗಱಿಯುಮ್, ತಿಣ್ ಶಕ್ಕರ
ನಿಱೈ ತೊಲ್‌ಪಡೈಯಾಯುನಕ್ಕೊನ್ಱುಣರ್‌ತ್ತುವನ್ ನಾನ್,
ಮುಱೈ ತೇನ್‌ಮೊೞಿಯಾರ್‌ಕಳ್ ನಿನ್ನರುಳ್ ಶೂಡುವಾರ್
ಮನಮ್ ವಾಡಿನಿಲ್ಲ, ಎಮ್
ಕುಱೈ ಪೂವೈಯೊಡುಮ್ ಕಿಳಿಯೋಡುಮ್ ಕುೞಕೇಲೇ.

ಪ್ರ|| ನಮ್ಬಿ-ಪೂರ್ಣನೇ !, ಕುೞಕೇಲ್-ಮೇಲೆ ಬಿದ್ದು ಮಾತನಾಡಬೇಡ (ಕೆಣಕಬೇಡ.) ತಿಣ್-ದೃಢವಾದ, ಶಕ್ಕರಮ್-ಚಕ್ರವೆಂಬ, ನಿಱೈ-ತೇಜಃ ಪ್ರಸರವುಳ್ಳ, ತೊಲ್‌ಪಡೈಯಾಯ್ – ಅಸಾಧಾರಣವಾದ ಆಯುಧವುಳ್ಳವನೇ !, ಉನ್-ನಿನ್ನ, ಕೈತವಮ್-ಕೃತ್ರಿಮವನ್ನು, ಮಣ್ಣುಮ್-ಭೂಲೋಕವೂ, ವಿಣ್ಣುಮ್-ದೇವಲೋಕವೂ, ನನ್ಗು-ಚೆನ್ನಾಗಿ, ಅಱಿಯುಮ್-ತಿಳಿಯುವುವು. (ಆದುದರಿಂದ) ಉನಕ್ಕು-ನಿನಗೆ, ನಾನ್-ನಾನು, ಒನ್ಱು-ಒಂದನ್ನು, ಉಣರ್‌ತ್ತುವನ್-ತಿಳಿಸುವೆನು. ನಿನ್ ಅರುಳ್-ನಿನ್ನ ಕೃಪೆಯನ್ನು, ಶೂಡುವಾರ್-ಶಿರಸಾವಹಿಸುವವರಾದ, ಮುಱೈ-ಅಭಿನವವಾದ, ತೇನ್-ಜೇನುತುಪ್ಪದಂತೆ ಮಧುರವಾದ, ಮೊೞಿಯಾರ್‌ಕಳ್-ಮಾತುಗಳುಳ್ಳ ಸ್ತ್ರೀಯರ, ಮನಮ್-ಮನಸ್ಸು, ವಾಡಿ-ಬಾಡಿ, ನಿಲ್ಲ-ನಿಲ್ಲಲು, ಎಮ್-ನಮ್ಮ, ಕುಱೈ-ಅವ್ಯಕ್ತಶಬ್ದವುಳ್ಳ, ಪೂವೈಯೊಡುಮ್-ಪೂವೈಯೆಂಬ ಪಕ್ಷಿಯೊಡನೆಯೂ, ಕಿಳಿಯೋಡುಮ್ – ಗಿಣಿಯೊಡನೆಯೂ, ಕುೞಕೇಲ್-ಲೀಲಾ ರಸವನ್ನು ಕೊಂಡಾಡಬೇಡ.

( ಸ-ಗಾ-ರ ॥ )—

ಮಿಥ್ಯಾಪೂರ್ಣ! ತವಾದ್ಯ ಕೃತ್ರಿಮವಚೋ ಮಾಽಸ್ತ್ವತ್ರ ತು ಶ್ರೀಹರೇ!
ಚಕ್ರಿನ್! ಕೈತವಮಸ್ತಿ ಸರ್ವವಿದಿತಂ ತೇ ಭೂತಲೇ ವಾ ದಿವಿ ।
ಕಿಞ್ಚಿದ್ವಚ್ಮಿ ತವಾದ್ಯ ತಚ್ಛೃಣು ತವ ಪ್ರೇಷ್ಠಾಸ್ತರುಣ್ಯಸ್ತ್ವಯಂ
ಸನ್ತಪ್ತಾ ಮಧುಭಾಷಿತಾಃ ಕಿಲ ತತೋ ಲೀಲಾಂ ಶುಕೈರ್ಮೇ ತ್ಯಜ ॥

ತಾ॥ ಪೂರ್ಣನೇ! ನನ್ನನ್ನು ಕೆಣಕಬೇಡ. (ನನಗೆ ಪ್ರತ್ಯುಕ್ತಿಗಳನ್ನು ಹೇಳಬೇಡ) ಎಲೈ ಚಕ್ರಪಾಣಿಯೇ! ನಿನ್ನ ಕೃತ್ರಿಮವನ್ನು ಭೂಲೋಕದವರೂ ದೇವಲೋಕದವರೂ ಚೆನ್ನಾಗಿ ತಿಳಿದಿರುತ್ತಾರೆ. ಆದುದರಿಂದ ನಿನಗೆ ನಾನು ಒಂದು ಮಾತನ್ನು ಹೇಳುತ್ತೇನೆ—ಕೇಳು. ನಿನ್ನ ಕೃಪೆಗೆ ಪಾತ್ರರಾದ ಮಧುರ ಭಾಷಿತೆಗಳಾದ ಸ್ತ್ರೀಜನರ ಮನಸ್ಸು (ನೀನು ಬರಲಿಲ್ಲವೆಂದು) ಬಾಡಿ ಹೋಗುತ್ತಿದೆ. ನೀನು ನಮ್ಮ ಈ ಪೂವೈ-ಗಿಣಿ-ಮುಂತಾದ ಪಕ್ಷಿಗಳೊಡನೆ ಲೀಲಾರಸದಲ್ಲಿ ವೃಥಾ ಕಾಲಹರಣವಂ ಮಾಡಬೇಡ. (ಹೋಗು—ಎಂದು ತಾತ್ಪರ್ಯ)

(೬) ಕುೞಕಿಯೆಙ್ಗಳ್ ಕುೞಮಣಱ್ಕೊಣ್ಡು
ಕೋಯಿನ್ಮೈಶೆಯ್ದು ಕನ್ಮನೊನ್ಱಿಲ್ಲೈ,
ಪೞಕಿ ಯಾಮಿರುಪ್ಪೋಮ್ ಪರಮೇ ಯಿತ್ತಿರುವರುಳ್ಕಳ್,
ಅೞಕಿಯಾರಿವ್ವುಲಕಮೂನ್ಱುಕ್ಕುಮ್ ತೇವಿಮೈತಕುವಾರ್
ಪಲರುಳರ್,
ಕೞಕಮೇಱೇಲ್ ನಮ್ಬೀ! ಉನಕ್ಕುಮಿಳೈತ್ತದೇ ಕನ್ಮಮೇ.

ಪ್ರ॥ ಕುೞಕಿ ಎಙ್ಗಳ್ ಕುೞಮಣಱ್ಕೊಣ್ಡು—ಆಟದಲ್ಲಿ ನಮ್ಮ ಬೊಂಬೆಯನ್ನು ಎತ್ತಿಕೊಂಡು, ಕೋಯಿನ್ಮೈಶೆಯ್ದು—ಏನೋ ಒಂದು ಪ್ರೀತಿಯನ್ನು ನಟಿಸಿದರೆ, ಒನ್ಱು ಕನ್ಮಮಿಲ್ಲೈ - ಒಂದು ಪ್ರಯೋಜನವೂ ಇಲ್ಲ. ಯಾಮ್—ನಾವು, ಪೞಕಿ ಇರುಪ್ಪೋಮ್ - ಮೊದಲಿಂದಲೇ (ನಿನ್ನ ಸರಸಗಳ ಕೃತ್ರಿಮವನ್ನೆಲ್ಲಾ) ತಿಳಿದೇ ಇದೇವೆ. ಇತ್ತಿರುವರುಳ್ಕಳ್ - ಈ (ನಿನ್ನ) ಅತಿಶಯಿತ ಕೃಪಾನಟನಗಳು, ಪರಮೇ - ನಾವು ಸಹಿಸತಕ್ಕವುಗಳಲ್ಲ. ಅೞಕಿಯಾರ್ - ರಮಣೀಯತೆಯುಳ್ಳ, ಇ ಉಲಕುಮೂನ್ಱುಕ್ಕುಮ್ - ಈ ಮೂರು ಲೋಕಗಳಿಗೂ, ತೇವಿಮೈ—ನಿನ್ನೊಡನೆ ದೇವಿಗಳಾಗಿ ಚೆನ್ನಾಗಿ ಬಾಳಲು, ತಕುವಾರ್ - ತಕ್ಕ ಯೋಗ್ಯತೆಯುಳ್ಳವರು, ಪಲರ್—"ದೇವ್ಯಸ್ಸಹಸ್ರಮ್" ಎಂಬ ರೀತ್ಯಾ ಅನೇಕಮಂದಿ, ಉಳರ್—ಇರುತ್ತಾ

ರಷ್ಟೆ! ನವಿನ್ನಾ - ನೀನು ಅವರನ್ನು ನಂಬಿಯಲ್ಲವೆ ಪರಿಪೂರ್ಣನಾಗಿರುತ್ತೀಯೆ, ಕ್ರಾಕಮ್-(ನಮ್ಮ) ಗುಂಪಿಗೆ ಬಂದು, ಏತ್ರೆಲ್-ಹತ್ತಬೇಡ. ಉನಶ್ಕ್ಯಮ್— (ಪರರಿಗೆ ವಂಚನೆಯನ್ನೇ ಮಾಡುವ) ನಿನಗೂ, ಕನ್ಮಮೋ-ಈ ಕಾರ್ಯವು, ಇಳ್ಳೈದು- ಅತ್ಯನ್ತ ಲಾಘವವನ್ನೇ (ಬಾಲಿಶತ್ವವನ್ನೇ) ಸೂಚಿಸುವುದು.

( ಸ-ಗಾ-ರ || )—

ಅಸ್ಮಾಕಂ ಪರಿಗೃಹ್ಯ ಪುತ್ತಲಿಮಿಮಾಂ ಕಿಂ ವಾಽಸಿ ಮುಗ್ಧೋಽಧುನಾ
ಕಿಂ ತೇ ಕಾರ್ಯಮಿತಃಪುರೈವ ಚರಿತಂ ವಿದ್ಮೋ ವಯಂ ತೇ ಹರೇ ? |
ಅಸ್ಮಾಕಂ ನ ಕಿಲ ಕ್ಷಮಾರ್ಹಮಿದಮುಸ್ಯಾಸ್ತೇ ತವ ಪ್ರೇಯಸೀ
ಗೋಷ್ಠೀ ತೇಽನುಗುಣಾ ತ್ರಿಲೋಕಮಹಿತಾ ಮಾಽಸ್ಮಾನುಪೈಹಿ ಸ್ವಯಮ್ ||

ತಾ|| ನಾವು ಆಟವಾಡುತ್ತಿರುವಾಗ ನೀನು ನಮ್ಮ ಬೊಂಬೆಯನ್ನು ಎತ್ತಿಕೊಂಡು ನಮ್ಮಲ್ಲಿ ಏನೋ ಒಂದುವಿಧವಾದ ಪ್ರೀತಿಯನ್ನು ನಟಿಸಿದರೆ ಏನು ಪ್ರಯೋಜನ? ನಿನ್ನ ಕೃತ್ರಿಮವೆಲ್ಲಾ ನಮಗೆ ತಿಳಿದೇ ಇದೆ. ಈ ನಿನ್ನ ಕಪಟವಾದ ಕೃಪಾವಿಶೇಷಗಳನ್ನು ನಾವು ಸಹಿಸಲಾರೆವು. ನಿನ್ನ ತ್ರೈಲೋಕ್ಯ ಸಾಮ್ರಾಜ್ಯಕ್ಕೆ ನಿನ್ನೊಡನೆ ಚೆನ್ನಾಗಿ ಬಾಳಲು ಅರ್ಹರಾದ ಸುನ್ದರ ಸ್ತ್ರೀಜನರು ಅನೇಕ ಸಹಸ್ರಸಂಖ್ಯರಾಗಿರುತ್ತಾರಷ್ಟೆ! ನೀನು ಅವರನ್ನೇ ನಂಬಿ ಪೂರ್ಣನಾಗಿರುತ್ತೀಯೇ. ನಮ್ಮ ಗುಂಪಿಗೆ ಪ್ರವೇಶಿಸಿ ಇನ್ತಹ ಕಾರ್ಯವನ್ನು ಮಾಡಬೇಡ. ಇದು ನಿನಗೆ ಯುಕ್ತವಲ್ಲ. ಅವಮಾನವನ್ನು ಉಂಟುಮಾಡುತ್ತದೆ. (ಆದುದರಿಂದ ಈ ಕಾರ್ಯವನ್ನು ಬಿಡು— ಎಂದು ಭಾವವು.)

(೭) ಕನ್ನಮುನ್ನಿಟ್ಟಿಳ್‌ಕ್ಕೈಯಿಲ್ ಪಾವ್ವೈಪಟಿಪ್ಪದು
ಕಡಲ್‌ಞಾಲಮುಣ್ಣಿಟ್ಟ,
ನಿನ್ನಲಾ ನೆಡಿಯಾಯುನಕ್ಕೇಲುಮ್ ಪಿತ್ತ್ಯಪಿತ್ತ್ಯಯೋ,
ವನ್ನಮೋ ಶೊಲ್ಲಿ ಯೆಮ್ಮೈ ನೀವಿಳ್ಳೈಯಾಡುದಿ
ಅದುಕೇಳ್ಕಿಲೆನ್ನೈವಾರ್,
ತನ್ನ ಪಾಪವೆನ್ನಾರೋರು ನಾಙ್ಗು ತಡಿಪಿಣಕ್ಕೇ.

ಪ್ರ॥ ಎಙ್ಗಳ್‌ಕೈಯಿಲ್ - ನಮ್ಮ ಕೈಯಲ್ಲಿರುವ, ಪಾವೈ-ಬೊಂಬೆಯನ್ನು, ಪತ್ತಿಪ್ಪದು-ಕಿತ್ತುಕೊಳ್ಳುವುದು, ಕನ್ನಮನ್ನು-ಯುಕ್ತವಾದ ಕಾರ್ಯವಲ್ಲ. ಕಡಲ್ ಞಾಲಮ್ - ಸಮುದ್ರದಲ್ಲಿ ಮುಳುಗಿಹೋಗಿದ್ದ ಪ್ರಪಂಚವನ್ನು, ಉಣ್ಡಿಟ್ಟ- (ಪ್ರಳಯಕಾಲದಲ್ಲಿ) ಭಕ್ಷಿಸಿ ಉದರದಲ್ಲಿಟ್ಟು ರಕ್ಷಿಸಿದ, ನಿನ್ಮಲಾ-ನಿರ್ಮಲಸ್ವಭಾವನೇ!, ನೆಡಿಯಾಯ್ - (ನಿನ್ನ) ಮಹತ್ತ್ವವನ್ನು ಎಲ್ಲರಿಗೂ ಪ್ರಕಾಶಪಡಿಸುವವನೇ, ಉನಕ್ಕುಮ್ - ನಿನಗೂ, ಪಿತ್ತೈ ಪಿತ್ತೈಯೇ--(ಇಂತಹ ಕೃತ್ರಿಮಚೇಷ್ಟೆಯಾದ) ದೋಷವು ದೋಷವೇ (ಅನರ್ಥಕರವೇ). ನೀ-(ಇಂತಹ ಮಹತ್ತ್ವವುಳ್ಳ) ನೀನು, ವನ್ಮಮ್- (ಅನೇಕ ಪೂರ್ವಚೇಷ್ಟಿತ ಸ್ಮರಣಗಳನ್ನುಂಟುಮಾಡಿ) ಮರ್ಮವಚನಗಳನ್ನು, ಎಮ್ಮೈ-ನಮ್ಮನ್ನು ಕುರಿತು, ಶೊಲ್ಲಿ - ಹೇಳಿ, ವಿಳೈಯಾಡುದಿ-ಲೀಲಾಪರನಾಗಿರುತ್ತೀಯೆ. ಎನ್ನೈಮಾರ್ - ನಮ್ಮ ಸಹೋದರರು, ಅದುಕೇಳ್ಕಿಲ್- ಅದನ್ನು (ನೀನು ಮಾಡುವ ಚೇಷ್ಟೆಯನ್ನು) ಕೇಳಿದರೆ, ತನ್ಮಪಾವಮ್-"ಧರ್ಮ" "ಪಾಪ" ಎಂದು, ಎನ್ನಾರ್-ನಿರೂಪಿಸುವವರಲ್ಲ (ವಿಚಾರಣೆಯಿಲ್ಲದೆ ನಿನ್ನನ್ನು ದಂಡಿಸುವವರು). ಒರುನಾನ್ನು-ಒಂದುದಿನ ಬಂದು, ತಡಿ-ಕೋಲನ್ನು ತಂದು, ಪಿಣಕ್ಕುಮ್ ಆಮ್ - ನಿನ್ನೊಂದಿಗೆ ಜಗಳವಾಡಿ ನಿನ್ನನ್ನು ಹೊಡೆದೂ ಹೊಡೆಯುವರು.

( ಸ-ಗಾ-ರ ॥ )—

ಅಸ್ಮಾಕಂ ಕರತೋಽದ್ಯ ಪುತ್ತಲಿಹೃತಿರ್ನೈವೋಚಿತಾ ತೇ ಹರೇ !
ಭುಕ್ತ್ವಾ ವಾರಿಧಿಮಗ್ನಮೇವ ಚ ಜಗತ್ಸಂರಕ್ಷ್ಯ ಶುದ್ಧೋಽಸಿ ಹಿ |
ದೋಷೋಽಯಂ ಕಿಲ ದೋಷ ಏವ ತವ ಚಾಸ್ಮಸ್ಮಾಸು ಲೀಲಾಂ ಚ ತೇ
ಶ್ರುತ್ವಾ ದಣ್ಡಧರಾ ಭವನ್ತಿ ಕರುಣಾಹೀನಾ ಹಿ ನಸ್ಸೋದರಾಃ ||

ತಾ॥ ನಮ್ಮ ಕೈಯಲ್ಲಿರುವ ಬೊಂಬೆಯನ್ನು ಕಿತ್ತುಕೊಳ್ಳುವುದು ಯುಕ್ತವಲ್ಲ. ಸರ್ವಜಗದ್ಭಕ್ಷಕನಾದ ನಿರ್ಮಲಸ್ವಭಾವನೇ ! ನಿನ್ನ ಮಹತ್ತ್ವವನ್ನು ಎಲ್ಲರಿಗೂ ಪ್ರಕಾಶಪಡಿಸಿಕೊಂಡಿರುತ್ತೀಯಷ್ಟೆ. ದೋಷವು (ಕೃತ್ರಿಮವು) ನಿನಗೂ ದೋಷವೇ (ಅನರ್ಥಕರವೇ). ನೀನು ಮರ್ಮೋಕ್ತಿಗಳನ್ನೆಲ್ಲಾ ಹೇಳಿ ನಮ್ಮೊಡನೆ ಲೀಲೆಗೆ ಬಂದಿರುತ್ತೀಯೆ ನಮ್ಮ ಸೋದರರಿಗೆ ಇದು ತಿಳಿದರೆ ಅವರು ಧರ್ಮ—ಕರ್ಮವೆಂದು ದಾಕ್ಷಿಣ್ಯವನ್ನೇ ನೋಡದೆ ನಿನ್ನನ್ನು ದಂಡಿಸುವರು. ಒಂದುದಿನ ಕೋಲನ್ನೂ ತಂದು ಜಗಳವಾಡಿ ನಿನ್ನನ್ನು ಹೊಡೆಯುವರು (ಎಂದು ಭಯಪಡಿಸುತ್ತಾರೆ).

(೮) ಪಿಣಕ್ಕಿ ಯಾವೈಯುಮ್ ಯಾವರುಮ್ ಪಿರ್‍ಯಾಮಲ್
ಪೇದಿತ್ತುಮ್ ಪೇದಿಯಾದದೋರ್,
ಕಣಕ್ಕಿಲ್ ಕೀರ್ತಿವೆಳ್ಳಕ್ಕದಿರ್ ಞಾನಮೂರ್ತ್ತಿಯಿನಾಯ್,
ಇಣಕ್ಕಿ ಯೆಮ್ಮೈ ಯೆಮ್‌ತೋೞಿಮಾರ್
ವಿಳೈಯಾಡಪ್ಪೋದುಮಿನೆನ್ನ ಪ್ಪೋನೋಮ್ಮೈ,
ಉಣಕ್ಕಿ ನೀ ವಳೈತ್ತಾಲ್ ಶೊಲ್ಲಾರುಕವಾದವರೇ!

ಪ್ರ॥ ಯಾವರುಮ್ ಯಾವೈಯುಮ್ -- ಸಕಲ ಚೇತನಾಚೇತನಪದಾರ್ಥಗಳನ್ನೂ, ಪಿಣಕ್ಕಿ-(ನಾಮರೂಪ ವಿಭಾಗವಿಲ್ಲದಂತೆ-ಸಂಹಾರದಶೆಯಲ್ಲಿ) ಸೇರಿಸಿ ಒಂದಾಗಿಮಾಡಿ, ಪಿರ್‍ಯಾಮಲ್-(ಸೃಷ್ಟಿದಶೆಯಲ್ಲಿ-ಆಯಾ ಚೇತನರ ಕರ್ಮಗಳಿಗೆ ಸಾಂಕರ್ಯವುಂಟಾಗದಂತೆ) ಬೇರೆ ಬೇರೆ ಮಾಡಿ, ಪೇದಿತ್ತುಮ್-(ದೇವತಿರ್ಯಗಾದಿ) ಜನ್ಮಭೇದಗಳನ್ನು ಉಂಟುಮಾಡಿದಾಗ್ಯೂ, ಪೇದಿಯಾದದು-ಆತ್ಮಸ್ವರೂಪದಲ್ಲಿ ಭೇದವಿಲ್ಲದಂತೆ ಮಾಡಿ, ಓರ್ ಕಣಕ್ಕು ಇಲ-ಒಂದು ಅದ್ವಿತೀಯವಾಗಿ ಅಪರಿಮಿತವಾದ, ಕೀರ್ತಿವೆಳ್ಳಮ್ - ಕೀರ್ತಿಸಮುದ್ರವುಳ್ಳ. ಕದಿರ್ - ಪ್ರಭಾರೂಪವಾದ, ಞಾನಮೂರ್ತ್ತಿಯಿನಾಯ್-ಸಂಕಲ್ಪರೂಪ ಜ್ಞಾನವನ್ನೇ ಮೂರ್ತಿಯಾಗಿ ಉಳ್ಳವನೇ!, ಎಮ್ ತೋೞಿಮಾರ್-ನಮ್ಮ ಸಖಿಯರು, ಎಮ್ಮೈ ಇಣಕ್ಕಿ-ನಮ್ಮನ್ನು ವಶವಾಗುವಂತೆ ಮಾಡಿ, ವಿಳೈಯಾಡ-ಆಟವಾಡುವುದಕ್ಕೆ, ಪೋದುಮಿನ್-'ಬನ್ನಿರಿ' ಎನ್ನ -- ಎಂದು, ಹೇಳಿದುದರಿಂದ, ಪೋನೋಮ್ಮೈ - ಆಟಕ್ಕೆ ಬಂದ ನಮ್ಮನ್ನು, ಉಣಕ್ಕಿ-(ನಿನ್ನ ಸೌನ್ದರ್ಯದಿಂದ) ವಶಮಾಡಿಕೊಂಡು, ನೀ-ನೀನು, ವಳೈತ್ತಾಲ್-(ನಮ್ಮನ್ನು ಸುತ್ತಿ ಸುತ್ತಿ ಬಂದು) ತಡೆದರೆ, ಉಕವಾದವರ್-(ಇದನ್ನು ನೋಡಿ) ಸಹಿಸಲಾರದ ಪೌರಜನರು, ಎನ್ ಶೊಲ್ಲಾರ್-ಏನು ಹೇಳಲಾರರು? (ಆದುದರಿಂದ ಹೀಗೆ ಮಾಡಬೇಡ—ಎಂದು ಭಾವವು.)

( ಸ-ಗಾ-ರ ॥ )—

ಸರ್ವಾಂ ಸೃಷ್ಟಿಂ ಚಿದಚಿದ್ಗಣಾನಪಿ ಭೃಶಂ ಸಮ್ಮೇಳಯನ್ ಭೇದಯನ್
ಭಾಸಿ ಜ್ಞಾನನಿಧಿಸ್ತ್ವಮೂರ್ತ ಉದಿತೋ ಭಾಸ್ವಾನಭಿನ್ನಸ್ಸ್ವಯಮ್ ।
ಪೂರ್ಣಃ ಕೀರ್ತಿಪಯೋನಿಧಿಃ ಕಿಲ ಸಖೀವರ್ಗೈರ್ವಯಂ ಚೋದಿತಾ
ಲೀಲಾಯಾಮಿಹ ವಾರಿತಾಸ್ತು ಭವತಾ ಕಿಂ ಬ್ರೂಯುರನ್ಯೇ ಜನಾಃ ? ॥

ತಾ॥ ಪ್ರಳಯಕಾಲದಲ್ಲಿ ಸಕಲ ಚೇತನಾಚೇತನ ಪದಾರ್ಥಗಳನ್ನೂ ಒಂದಾಗಿ ಸೇರಿಸಿ, ಅನನ್ತರ ಸೃಷ್ಟಿಕಾಲದಲ್ಲಿ ಅವುಗಳನ್ನು (ನಾಮರೂಪ ವಿಭಾಗ ದಿಂದ ಕರ್ಮಾನುಗುಣವಾಗಿ) ಬೇರೆಬೇರೆ ಮಾಡಿ ನಾನಾ ಜನ್ಮಭೇದಗಳನ್ನೂ ನೀನು ಉಂಟುಮಾಡಿದಾಗ್ಯೂ ಆತ್ಮಸ್ವರೂಪದಲ್ಲಿ ಭೇದವಿಲ್ಲದಂತೆ ಮಾಡಿರುವ ವನಲ್ಲವೇ? ಅದ್ವಿತೀಯ ಕೀರ್ತಿಸಮುದ್ರನಾದ ದಿವ್ಯತೇಜೋಮೂರ್ತಿಯೇ! ನಮ್ಮ ಸಖಿಯರು ನಮ್ಮನ್ನು ಆಟಕ್ಕೆ ಕರೆದುದರಿಂದ ಬಂದುಬಿಟ್ಟೆವು. (ನೀನು ಹೀಗೆ ಹಠಾತ್ತಾಗಿ ಬರುತ್ತೀಯೆಂದು ತಿಳಿಯಲಿಲ್ಲ.) ನೀನು ಹೀಗೆ ನಮ್ಮನ್ನೆಲ್ಲಾ ವಶಮಾಡಿ ಕೊಂಡು ತಡೆದರೆ—ಊರಿನವರು ಏನು ಹೇಳಲಾರರು ? ನೀನೇ ನೋಡು.

(೯) ಉಕವೈಯಾಲ್ ನೆಞ್ಜಮುಳ್ಳುರುಕಿ ಉನ್ ತಾಮರೈ
ತ್ತಡಮ್‌ಕಣ್ ವಿೞಿಕಳಿನ್,
ಅಕವಲೈಪ್ಪಡುಪ್ಪಾನ್ ಅೞಿತ್ತಾಯ್ ತಿರುವಡಿಯಾಲ್,
ತಕವು ಶೆಯ್ದಿಲೈ ಯೆಙ್ಗಳ್‌ಶಿಱ್ಱಿಲುಮ್ ಯಾಮಡು
ಶಿಱುಶೋಱುಮ್ ಕಣ್ಡು, ನಿನ್
ಮುಕವೊಳಿತಿಕೞ ಮುಱುವಲ್‌ಶೆಯ್ದು ನಿನ್ಱಿಲೈಯೇ.

ಪ್ರ॥ ಉಕವೈಯಾಲ್-ಅನ್ತರಂಗವು ಸನ್ತುಷ್ಟವಾಗಿ, ನೆಞ್ಜಮ್-ಮನಸ್ಸು, ಉಳ್ಳುರುಕಿ-ಒಳಗೆ ದ್ರವೀಭೂತವಾಗಿ, ಉನ್-ನಿನ್ನ, ತಾಮರೈ - ತಾವರೆಯಂತೆ ಇರುವ, ತಡಮ್‌ಕಣ್-ವಿಶಾಲವಾದ ನೇತ್ರಗಳ, ವಿೞಿಕಳ್ - ಕಟಾಕ್ಷಗಳೆಂಬ, ವಲೈ-ಬಲೆಯೊಳಗೆ, ಅಕಪ್ಪಡುಪ್ಪಾನ್-(ನಮ್ಮನ್ನು) ಸಿಕ್ಕಿಸಿಕೊಳ್ಳುವುದಕ್ಕೋಸ್ಕರ, ಎಙ್ಗಳ್-ನಮ್ಮ, ಶಿಱ್ಱಿಲುಮ್-(ಆಟಕ್ಕೆ ಮಣ್ಣಿನಿಂದ ಮಾಡಿರುವ) ಚಿಕ್ಕ ಮನೆ ಗಳನ್ನೂ, ಯಾಮ್-ನಾವು, ಅಡು-ಬಡಿಸಿ ಇರುವ, ಶಿಱು ಶೋಱುಮ್-(ಮಕ್ಕಳ) ಚಿಕ್ಕ ಊಟದ ಅನ್ನವನ್ನೂ, ಕಣ್ಡು-ಕಂಡು, ನಿನ್ ಮುಕಮ್-ನಿನ್ನ ಮುಖದಲ್ಲಿ ಒಳಿತಿಕೞ-ತೇಜಸ್ಸು ಪ್ರಕಾಶಿಸುವಂತೆ, ಮುಱುವಲ್‌ಶೆಯ್ದು-ಮಂದಹಾಸವನ್ನು ಮಾಡಿ, ನಿನ್ಱಿಲೈ-ನೋಡಿಕೊಂಡು (ನೀನು) ನಿಂತಿರದೆ, ಉನ್ ತಿರುವಡಿಯಾಲ್-ನಿನ್ನ ಪಾದಗಳಿಂದ, ಅೞಿತ್ತಾಯ್-ಈ ನಮ್ಮ ಆಟಗಳನ್ನೆಲ್ಲಾ ಕೆಡಿಸಿ ಬಿಟ್ಟೀ ತ್ತೀಯೆ. ತಕವು ಶೆಯ್ದಿಲೈ - ಯುಕ್ತವಾದ ಕೆಲಸವನ್ನು ನೀನು ಮಾಡಲಿಲ್ಲ (ನಿರ್ದಯನಾಗಿ ಅನುಚಿತವಾದ ಕೆಲಸವನ್ನೇ ಮಾಡಿರುತ್ತೀಯೆ.)

( ಸ-ಗಾ-ರ ‖ )—

ಪ್ರೀತ್ಯಾಽನ್ತರ್ಹೃದಯಂ ದ್ರವೀಕೃತಮಿದಂ ಭೂಯಾತ್ ಕಟಾಕ್ಷೈಸ್ತ್ವ
ಶ್ರೀಪದ್ಮಾಕ್ಷ ! ವಶೀಕೃತಾ ವಯಮವಿಾ ಭೂಯಾಸ್ಮ ಚೇತಿ ತ್ವಯಾ |
ಅಸ್ಮಾಕಂ ಹಿ ವಿನಾಶಿತಂ ಸುರುಚಿರಂ ಲೀಲಾಗೃಹಂ ಚೌದನಂ
ಪಾದೇನೈವ ತವಾದ್ಯ ಹನ್ತ ! ನ ಹಿ ತದ್ದೃಷ್ಟಂ ತ್ವಯಾ ಸಸ್ಮಿತಮ್ ‖

ತಾ‖ ನಮ್ಮ ಅನ್ತರಂಗವನ್ನು ಸನ್ತೋಷಪಡಿಸಿ ಮನಸ್ಸು ಕರಗುವಂತೆ ಮಾಡಿ, ನಿನ್ನ ದಿವ್ಯಕಟಾಕ್ಷಗಳೆಂಬ ಬಲೆಯೊಳಗೆ ನಮ್ಮನ್ನು ಸಿಕ್ಕಿಸಿಕೊಳ್ಳುವುದ ಕ್ಕೋಸ್ಕರ, ನಮ್ಮ ಚಿಕ್ಕ ಆಟದ ಮನೆಗಳನ್ನೂ, ನಮ್ಮ ಚಿಕ್ಕ ಊಟದ ಅನ್ನವನ್ನೂ ನೀನು ನಿನ್ನ ಪಾದಗಳಿಂದ ಕೆಡಿಸಿಬಿಟ್ಟಿರುತ್ತೀಯೆ. ಇದು ನಿನಗೆ ಉಚಿತವೇ ? ಈ ನಮ್ಮ ಆಟವನ್ನೆಲ್ಲಾ ನೀನು ಕಂಡು, ನಿನ್ನ ಮುಖಕಾಂತಿಯೊಡನೆ ಮಂದಹಾಸ ವನ್ನು ಮಾಡಿಕೊಂಡು, ಸುಮ್ಮನೆ ನೋಡಿಕೊಂಡು ನಿಂತಿರಬೇಕಷ್ಟೆ ! ನೀನು ಹೀಗೆ ಕೆಡಿಸುವುದು ಅನುಚಿತವಾದುದು—(ಎನ್ನುತ್ತಾಳೆ) (ಇದರಿಂದ-ಲೀಲಾವಿಭೂತಿ ಯಲ್ಲಿ ಚೇತನರಿಗೆ ಇರುವ ಆಶೆಯನ್ನು ಭಗವನ್ತನು ಬಿಡಿಸುತ್ತಾನೆಂದು ವೇದಾನ್ತ ತತ್ತ್ವವೂ ವ್ಯಕ್ತವಾಗುತ್ತದೆ.)

(೧೦) ನಿಸ್ಸಿಲಙ್ಗುಮುಡಿಯಿನಾಯಿರುಪತ್ತೊರ್ ಕಾಲರಶು
ಕಳೈಕಟ್ಟ,
ವೆನ್ರಿ ನೀಳ್ಮಳುವಾ ! ವಿಯರ್ಞಾಲಮ್ ಮುನ್ ಪಡೈತ್ತಾಯ್,
ಇನ್ರಿವ್ವಾಯರ್ ಕುಲತ್ತೈ ವೀಡುಯ್ಯತೋನ್ರಿಯ
ಕರುಮಾಣಿಕ್ಕಚ್ಚುಡರ್,
ನಿನ್ರನ್ನಾಲ್ ನಲಿವೇ ಪಡುವೋಮೆನ್ಹುಮಾಯರ್ಚ್ಚಿಯೋಮೇ.

ಪ್ರ‖ ನಿನ್ರು-ಸ್ಥಿರವಾಗಿ, ಇಲಙ್ಗು-ಪ್ರಕಾಶಿಸುವ, ಮುಡಿಯಿನಾಯ್-ಕಿರೀಟ ವುಳ್ಳವನೇ !, ಇರುಪತ್ತೊರ್ ಕಾಲ್ – ಇಪ್ಪತ್ತೊಂದುಸಲ, ಅರಶು-(ದುಷ್ಟ) ರಾಜರನ್ನು, ಕಳೈಕಟ್ಟ-ನಿರ್ಮೂಲಮಾಡಿದ, ವೆನ್ರಿ-ಜಯವುಳ್ಳ, ನೀಳ್ಮಳುವಾ- ಮಹಾ ಪರಶುಧಾರಿಯಾದವನೇ !, ವಿಯಲ್ – ವಿಸ್ತೀರ್ಣವಾದ, ಞಾಲಮ್- ಜಗತ್ತನ್ನು, ಮುನ್-ಸೃಷ್ಟಿಕಾಲದಲ್ಲಿ, ಪಡೈತ್ತಾಯ್ – ಸೃಷ್ಟಿಸಿದವನಾಗಿ, ಇನ್ರು- ಈಗ, ಇವ್ವಾಯರ್ ಕುಲತ್ತೈ –ಈ ಗೋಪಕುಲವನ್ನು, ವೀಡು – ತಮ್ಮ ವಂಶ

ವೆಲ್ಲಾ, ಉಯ್ಯ ತೋನ್ರಿಯ – ಉಜ್ಜೀವಿಸುವಂತೆ ಮಾಡಲು ಅವತರಿಸಿದ, ಕರುಮಾಣಿಕ್ಕಚ್ಚುಡರ್–ನೀಲರತ್ನಪ್ರಭೋಜ್ಜ್ವಲಮೂರ್ತಿಯೇ!, ನೀ ತನ್ನಾಲ್–(ಇಂತಹ) ನಿನ್ನಿಂದ, ಆಯ್‌ಚ್ಚಿಯೋಮೇ – (ಅಜ್ಞರಾಗಿ) ಗೋಪಿಗಳಾಗಿ ಹುಟ್ಟಿದ ನಾವು, ಎನ್ರುಮ್ – ಎಂದೆಂದಿಗೂ, ನಲಿವುಪಡುವೋಮೇ – ಕಷ್ಟಪಡ ಬೇಕಾಗಿರುವುದಲ್ಲವೇ ? (ಇದು ನಿನಗೆ ತಿಳಿಯಲಾರದು—ಎಂದು ಭಾವವು.)

( ಸ–ಗಾ–ರ || )—

ಭಾಸ್ವದ್ದಿವ್ಯಕಿರೀಟ! ಭೋಃ ! ಪರಶುಭೃತ್ ಪ್ರಧ್ವಂಸಯನ್ ದುರ್ನೃಪಾನ್
ಪ್ರಖ್ಯಾತೋಽಸಿ ಯದೇಕವಿಂಶತಿಜಯೈಃ ! ಪೂರ್ವಂ ಜಗತ್ಸೃಷ್ಟಿಕೃತ್ |
ಅದ್ಯ ತ್ವಂ ಕಿಲ ಗೋಪವಂಶಮಖಿಲಂ ಚೋಜ್ಜೀವಯನ್ ಭಾಸ್ಯಹೋ !
ನೀಲಶ್ರೀಮಣಿವರ್ಣ ! ತೇಽದ್ಯ ಚರಿತ್ರೈರ್ಗೋಪ್ಯೋ ವಯಂ ಕರ್ಶಿತಾಃ ||

ತಾ|| ನಿತ್ಯೋಜ್ಜ್ವಲ ದಿವ್ಯಕಿರೀಟಧಾರಿಯೇ! ದುಷ್ಟರಾಜರನ್ನು ಇಪ್ಪತ್ತೊಂದುಸಲ ನಿರ್ಮೂಲಮಾಡಿದ ಮಹಾ ಪರಶುಧಾರಿಯೇ! ಈ ವಿಶಾಲವಾದ ಪ್ರಪಂಚವನ್ನೆಲ್ಲಾ ನೀನೇ ಪೂರ್ವದಲ್ಲಿ ಸೃಷ್ಟಿಮಾಡಿ, ಈಗ ಗೋಪಕುಲವನ್ನೆಲ್ಲಾ ಉಜ್ಜೀವಿಸುವಂತೆ ಮಾಡಲು ಅವತರಿಸಿದ ನೀಲಮಾಣಿಕ್ಯ ತೇಜೋಮೂರ್ತಿಯೇ! ಇಂತಹ ನಿನ್ನಿಂದ ಗೋಪೀಕುಲಕ್ಕೆ ಸೇರಿದ ನಾವೆಲ್ಲರೂ ಹೀಗೆ ಎಂದೆಂದಿಗೂ ಕಷ್ಟಪಡಬೇಕಾಗಿ ಬಂದಿರುವುದನ್ನು ನೀನು ತಿಳಿಯಲಾರೆ. (ಸ್ತ್ರೀಜನರಾದ ನಮ್ಮ ಕಷ್ಟವು ನಿನಗೆ ತಿಳಿಯದು—ಎಂದು ಭಾವವು.)

(೧೧) ಆಯ್‌ಚ್ಚಿಯಾಕಿಯ ಅನ್ನೈಯಾಲನ್ರು
ವೆಣ್ಣೆಯ್‌ವಾತ್ತೈಯುಳ್ ಶೀಱ್ರಮುಣ್ಡು
ಕೂತ್ತವಪ್ಪನ್ ತನ್ನೈಕ್ಕುರುಕೂರ್‌ಚ್ಚಡಕೋಪನ್,
ಏತ್ತಿಯ ತಮಿೞ್‌ಮಾಲೈ ಆಯಿರತ್ತುಳಿವೈಯುಮ್–
ಮೋರ್‌ಪತ್ತಿವೈಯೊಡುಮ್,
ನಾತ್ತನ್ನಾಲ್ ನವಿಲ ವುರೈಪ್ಪಾರ್‌ಕ್ಕಿಲ್ಲೈ ನಲ್‌ಕುರವೇ.

ಪ್ರ|| ಆಯ್‌ಚ್ಚಿಯಾಕಿಯ – ಗೋಪಕುಲದಲ್ಲಿ ಹುಟ್ಟಿದ, ಅನ್ನೈಯಾಲ್–ಯಶೋದೆಯೆಂಬ ತಾಯಿಯಿಂದ, ಅನ್ರು–ಆದಿನ, ವೆಣ್ಣೆಯ್ ವಾತ್ತೈಯುಳ್–ಬೆಣ್ಣೆಯನ್ನು ಕದ್ದಮಾತು ಹುಟ್ಟಿದ ಸಮಯದಲ್ಲಿ, ಶೀಱ್ರಮುಣ್ಡು–ರೋಷದಿಂದ, ಅಪ್ರ–ಅತ್ತು ನಾನಾವಿಧವಾದ ಕೋಲಾಹಲವನ್ನು ಮಾಡಿದ, ಕೂತ್ತನ್–ಆಟಗಾರ

ನಾದ, ಅಪ್ಪೋತನ್ನೈ - ಲೋಕೋಪಕಾರಕನಾದ ಸ್ವಾಮಿಯನ್ನು, ಕುರುಕೂರ್ ಚ್ಚಡಕೋಪನ್ – ಶ್ರೀ ಕುರುಕಾಪುರಿಯ ಶಠಾರಿಮುನಿಯು ಏತ್ತಿಯ – ಸ್ತೋತ್ರ ಮಾಡಲು ರಚಿಸಿದ, ತಮಿೞ್ಮಾಲೈ – ದ್ರಾವಿಡ ಪದ್ಯಮಾಲೆಯಾದ, ಆಯಿರತ್ತು ಳ್ಳುಮ್ – ಸಹಸ್ರಗಾಥಾಪ್ರಬನ್ಧದಲ್ಲಿ, ಇವ್ವೈ ಓರ್ ಪತ್ತುಮ್–ಈ ಅದ್ವಿತೀಯ ವಾದ ಹತ್ತು ಪದ್ಯಗಳನ್ನು, ಇಶೈಯೊಡುಮ್ – ಗಾನದೊಡನೆ, ನಾತ್ತನ್ನಾಲ್– ನಾಲಿಗೆಯಿಂದ, ನವಿಲ–ಚೆನ್ನಾಗಿ (ಗಟ್ಟಿಯಾಗಿ), ಉರೈಪ್ಪಾರ್ಕ್ಕು–ಹೇಳುವವರಿಗೆ, ನಲ್‍ಕುರವು–ಭಗವನ್ತನ ಅಲಾಭವೆಂಬ ದಾರಿದ್ರ್ಯವು, ಇಲ್ಲೈ–ಇಲ್ಲ.

( ಸ–ಗಾ–ರ ॥ )—

> ಗೋಪ್ಯಾಂ ತನ್ನವನೀತಚೌರ್ಯಕಥನೇ ಸತ್ಯಾಂ ಸ್ವಯಂ ಮಾತರಿ
> ಶ್ರೀಕೃಷ್ಣಂ ವಿಲಪನ್ತಮೇವ ಚ ರುಷಾ ಸ್ತೋತುಂ ಶಠಾರಿರ್ಮುನಿಃ ।
> ಸಾಹಸ್ರಂ ಕುರುಕಾಪುರಪ್ರಭುರಸಾವಾಹೋತ್ತಮಂ ದ್ರಾವಿಡಂ !
> ತತ್ರೇದಂ ದಶಕಂ ಶುಭನ್ತು ಪಠತಾಂ ನೈವಾಸ್ತ್ಯಲಭ್ಯಂ ಶುಭಮ್ ॥

ತಾ॥ ಗೋಪಿಯಾದ ಯಶೋದೆಯೆಂಬ ತಾಯಿಯು ಇವನು ಬೆಣ್ಣೆಯನ್ನು ಕದ್ದ ವಾರ್ತೆಯನ್ನು ಹೇಳಿದಾಗ ಇವನು ರೋಷದಿಂದ ಅತ್ತು ನಾನಾವಿಧವಾದ ಕೋಲಾಹಲವಂ ಮಾಡಿದ ಆಟಗಾರನೆಂದು ತಿಳಿದು—ಇನ್ತಹ ಸ್ವಾಮಿಯನ್ನು ಸ್ತೋತ್ರಮಾಡುವುದಕ್ಕಾಗಿ ಶ್ರೀ ಶಠಾರಿಮುನಿಯು ರಚಿಸಿದ ಸಹಸ್ರಪದ್ಯಮಾಲೆ ಯೊಳು ಈ ದಶಕವನ್ನು ಗಾನದೊಡನೆ ಉಚ್ಚಸ್ವರದಿಂದ ಪಠನಮಾಡುವವರಿಗೆ ಶ್ರೀ ಭಗವದಲಾಭವೆಂಬ ಕೊರತೆಯು ಇಲ್ಲವೇ ಇಲ್ಲ—(ನಿತ್ಯವೂ ಶ್ರೀ ಭಗವತ್ಸಾನ್ನಿಧ್ಯವೇ ಉಂಟಾಗುವುದು— ಎಂದು ಭಾವವು.)

( ದ್ರ–ಉ–ಸಂ ॥ )—

> ತಾವದ್ವಿಲಮ್ಬಮಸಹನ್ ಪ್ರಣಯೇನ ರೋಷಾತ್
> ಕೃಷ್ಣಂ ಸಮಾಗತಮಪಿ ತ್ವರಯಾ ವಿನಿನ್ದ್ಯ ।
> ತೇನ ಸ್ವಸಙ್ಗಮಮನೋರಥಿನಾ ದ್ವಿತೀಯೇ
> ಸಾನ್ತ್ವೋಕ್ತಿಭಿಸ್ಸಮನುನೀಯ ಸಮಾಹಿತೋಽಭೂತ್ ॥

( ದ್ರ– ಉ–ತಾ–ರ ॥ )—

> ಪೂರ್ಣತ್ವಾದ್ಗೋಪನಾರೀಜನಸುಲಭತಯಾ ಜೋಡನಾದಮ್ಬುರಾಶೇ–
> ರ್ನ್ಯಗ್ರೋಧಾಗ್ರೇಶಯತ್ವಾದರಿಸುಭಗತಯಾ ಶ್ರೀಮಹೀವಲ್ಲಭತ್ವಾತ್ ।
> ನಿರ್ದೋಷೋತ್ತುಙ್ಗಭಾವಾನ್ನಿರವಧಿಕಯಶಸ್ಸದ್ವಿಶೋಕಾದಿದೃಶ್ಯತ್ವ–
> ನ್ಮೋಕ್ಷಸ್ಪರ್ಶೇಚ್ಛಯಾ ಚ ಸ್ವಯಮಭಿಸರತೀತ್ಯಾಹ ಕೃಷ್ಣಂ ಶಠಾರಿಃ ॥

(ಈ ದ್ವಿತೀಯದಶಕದ ಸಾರಾಂಶ)—

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ, ನಾಯಕನಾದ ಶ್ರೀಕೃಷ್ಣನು ಬರಲಿಲ್ಲವೆಂದು ಚಿನ್ತಾಕ್ರಾನ್ತೆಯಾಗಿದ್ದ ಈ ನಾಯಕಿಯು ಅವನು ಬಂದಮೇಲೆ ತನ್ನ ಪ್ರಣಯಕೋಪವನ್ನು ಅವನಲ್ಲಿ ತೋರಿಸಿ, ಅವನಿಗೆ ಪ್ರಿಯತಮರಾದ ಸುನ್ದರ ಸ್ತ್ರೀಜನರು ಅನ್ಯತ್ರ ಇದಾರೆಂದು ಅಲ್ಲಿಗೆ ಹೋಗುವಂತೆ ಅವನನ್ನು ನಿರಾಕರಿಸಿ, ಇವಳು ಸಖೀಜನರೊಡನೆ ಆಡುತ್ತಿರುವಾಗ ಅವನು ಮಾಡಿದ ಕೃತ್ರಿಮಚೇಷ್ಟೆಗಳನ್ನೆಲ್ಲಾ ವರ್ಣಿಸಿ, ಅವನ ಮನೋರಥವನ್ನು ತಿಳಿದು ಸನ್ತುಷ್ಟೆಯಾದ ವಿವರವನ್ನು ವರ್ಣಿಸಿ ಇರುತ್ತಾರೆ.

---

ಶ್ರೀಃ

# ಷಷ್ಠಶತಕದಲ್ಲಿ—ತೃತೀಯದಶಕ.

(ನಲ್‌ಕುರವುಮ್ ಶೆಲ್ವುಮ್—)

[ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಪ್ರಣಯಕಲಹದಿಂದ ಕೋಪಾವಿಷ್ಟೆಯಾದ ನಾಯಕಿಯಾದ ತಮ್ಮನ್ನು ನಾಯಕನಾದ ಭಗವನ್ತನು ವರಿಸಿದ ಪ್ರಕಾರವನ್ನು ವರ್ಣಿಸಿ ಇರುತ್ತಾರೆ. ಈ ದಶಕವು—ತಿರುವಿಣ್ಣಗರ್ (ಶ್ರೀ ದಿವ್ಯಪುರೀ)—ದಿವ್ಯದೇಶದ ಸ್ವಾಮಿಯ ವಿಷಯದಲ್ಲಿ ಸ್ತುತಿರೂಪವಾಗಿ ರಚಿಸಲ್ಪಟ್ಟಿದೆ.]

---

(೧) ನಲ್‌ಕುರವುಮ್ ಶೆಲ್ವುಮ್ ನರಕುಮ್
ಶುವರ್‌ಕ್ಕಮುಮಾಯ್,
ನಲ್‌ಪಕೈಯುಮ್ ನಟ್ಪುಮ್
ವಿಡಮುಮಮುದಮುಮಾಯ್,
ಪಲ್‌ವಕೈಯುಮ್ ಪರನ್ದ ಪೆರುಮಾನೆನ್ನೈಯಾಳ್ವಾನೈ,
ಶೆಲ್ವಮ್ ಮಲಿಕು ಕುಡಿ ತ್ತಿರುವಿಣ್ಣಗರ್ ಕ್ಕಣ್ಡೇನೇ.

ಪ್ರ॥ ನಲ್ಕುರವುಮ್ – ಪದಾರ್ಥ ಸಂಕೋಚರೂಪವಾದ ದಾರಿದ್ರ್ಯವೂ, ಶೆಲ್ವುಮ್ – ಪದಾರ್ಥಸಮೃದ್ಧಿರೂಪವಾದ ಸಮ್ಪತ್ತೂ, ನರಕುಮ್–ನರಕವೂ, ಶುವರ್‍ಕ್ಕಮುಮ್–ಸ್ವರ್ಗವೂ, ಆಯ್ – ಆಗಿ, ವೆಲ್–ಶತ್ರುಗಳನ್ನು ಧ್ವಂಸ ಮಾಡುವ, ಪಕೈಯುಮ್–ದ್ವೇಷವೂ, ನಳ್ಪುಮ್–ಮೈತ್ರಿಯೂ, ವಿಡಮುಮ್–ವಿಷವೂ, ಅಮುದಮುಮ್–ಅಮೃತವೂ, ಆಯ್–ಆಗಿ, (ಹೀಗೆ) ಪಲ್ವಕೈಯುಮ್–ನಾನಾಪ್ರಕಾರಗಳಲ್ಲಿಯೂ, ಪರನ್ದ–ವ್ಯಾಪಿಸಿ ಇರುವ, ಪೆರುಮಾನ್–ಸರ್ವೇಶ್ವರನಾದ, ಎನ್ನೈಯಾಳ್ವಾನೈ–ನನ್ನ ಸ್ವಾಮಿಯನ್ನು, ಶೆಲ್ವಮ್ – ಭಗವದನುಭವೈಶ್ವರ್ಯವು, ಮಲ್ಕು–ಅಧಿಕವಾಗಿರುವ, ಕುಡಿ-ಸಜ್ಜನಸಂಘವುಳ್ಳ, ತಿರುವಿಣ್ಣಕರ್-ಶ್ರೀ ದಿವ್ಯಪುರಿಯಲ್ಲಿ, ಕಣ್ಡೇನೇ–ಕಂಡೆನಲ್ಲವೇ !

( ಸ–ಗಾ–ರ || )—

**ಶ್ರೀಸಂಕೋಚಧನಾಢ್ಯತೇ ಚ ನರಕಸ್ವರ್ಗೌ ಚ ವೈರಾತಿ-ಸೌ-**
**ಹಾರ್ದೇ ಚಾಪಿ ವಿಷಾಮೃತೇ ಚ ಸಕಲಂ ಭೂತ್ವಾ ಸ್ವಯಂ ವ್ಯಾಪಕಃ ।**
**ಸ್ವಾಮೀ ನಃ ಪರಮೇಶ್ವರೋ ಮನು ವಿಭುರ್ಯೋ ಭಾತಿ ಪಶ್ಯಾಮಿ ತಂ**
**ಶ್ರೀಸಮ್ಪೂರ್ಣಕುಲಾಶ್ರಯೇ ತು ನಗರೇ ಶ್ರೀದಿವ್ಯಪುರ್ಯಾಹ್ವಯೇ ॥**

ತಾ॥ (ಸರ್ವವ್ಯಾಪಕನಾದ ಭಗವನ್ತನನ್ನು ತಿರುವಿಣ್ಣಕರ್—ಶ್ರೀದಿವ್ಯಪುರಿಯಲ್ಲಿ ಕಂಡೆನು – ಎಂದು ಹೇಳುತ್ತಾರೆ.) ಪದಾರ್ಥಸಂಕೋಚರೂಪವಾದ ದಾರಿದ್ರ್ಯವೂ ಐಶ್ವರ್ಯವೂ, ನರಕವೂ ಸ್ವರ್ಗವೂ, ದ್ವೇಷವೂ ಮೈತ್ರಿಯೂ, ವಿಷವೂ ಅಮೃತವೂ—ಈ ಪ್ರಕಾರವಾದ ದ್ವನ್ದ್ವಗಳೆಲ್ಲಾ ತಾನೇ ಆಗಿ ಸರ್ವವ್ಯಾಪಿಯಾಗಿರುವ ನನ್ನ ಸ್ವಾಮಿಯನ್ನು ಶ್ರೀಸಮೃದ್ಧಿಯುಳ್ಳ ಸಜ್ಜನಭರಿತವಾದ ಶ್ರೀದಿವ್ಯಪುರಿಯಲ್ಲಿ ನಾನು ಕಂಡೆನಷ್ಟೆ !

(೨) ಕಣ್ಡವಿನ್ಬಮ್ತುನ್ಬಮ್ ಕಲಕ್ಕಙ್ಗಳುಮ್
ತೇಱ್ಱಮುಮಾಯ್,
ತಣ್ಡಮುಮ್ ತಣ್ಮೈಯುಮ್ ತಳ್ಳುಮ್ ನಿಱಲುಮಾಯ್,
ಕಣ್ಡುಕೋಡಙ್ಕುರಿಯ ಪೆರುಮಾನೆನ್ನೈಯಾಳ್ವಾನೂರ್,
ತೆಣ್ಡಿರೈಪ್ಪುನಲ್ಶೂೞ್ ತಿರುವಿಣ್ಣಕರ್ ನನ್ನಕರೇ.

ಪ್ರ॥ ಕಣ್ಡ–ಲೋಕದೃಷ್ಟವಾದ, ಇನ್ಬಮ್ ತುನ್ಬಮ್–ಸುಖದುಃಖಗಳೂ, ಕಲಕ್ಕಙ್ಗಳುಮ್–(ದುಃಖದಿಂದ) ಚಿನ್ತಾವ್ಯಾಕುಲತೆಗಳೂ, ತೇಱ್ಱಮುಮ್–(ಸುಖದಿಂದ) ಮನಶ್ಶಾನ್ತಿಯೂ, ಆಯ್–ಆಗಿ, ತಣ್ಡಮುಮ್ – ಕೋಪವೂ, ತಣ್ಮೈ

ಯುಮ್- ಪ್ರಸನ್ನತ್ವವೂ, ತಱುಲುಮ್ - (ತಾಪವುಳ್ಳ) ಅಗ್ನಿಯೂ, ನಿೞಲುಮ್- (ಶೈತ್ಯವುಳ್ಳ) ಛಾಯೆಯೂ, ಆಯ್-ಆಗಿ, ಕಣ್ಗಾಣೊಣ್ಣಾ-ಸಜಾತೀಯವಾಗಿ ಕಾಣಲು, ಅರಿಯ-ಅಶಕ್ಯನಾದ, ಪೆರುಮಾನ್-ಸರ್ವೇಶ್ವರನಾದ, ಎನ್ನೈಯಾಳ್ವಾನ್- ನನ್ನನ್ನು ಆಳುವ ಸ್ವಾಮಿಯ, ಊರ್-ವಾಸಸ್ಥಾನವು, ತೆಣ್ತಿರೈ-(ತೆಣ್ತಿರೈ)- ನಿರ್ಮಲವಾಗಿಯೂ ಅಲೆಗಳೊಡನೆ ಕೂಡಿದುದಾಗಿಯೂ ಇರುವ, ಪುನಲ್-ತೀರ್ಥ ಗಳಿಂದ, ಶೂೞ್-ಪರಿವೃತವಾದ, ತಿರುವಿಣ್ಣಗರ್-ಶ್ರೀದಿವ್ಯಪುರಿಯೆಂಬ, ನಲ್‌ನಕರ್ -ರಮಣೀಯವಾದ ನಗರವು.

( ಸ-ಗಾ-ರ ॥ )—

**ದೃಶ್ಯಂ ಯತ್ಸುಖದುಃಖರೂಪಮಖಿಲಂ ಚಿನ್ತಾಪ್ರಶಾನ್ತ್ಯಾತ್ಮಕಂ**
**ಶೀತೋಷ್ಣಂ ಚ ವಿಭೇಽವಿರುದ್ಧಮಪಿ ಯತ್ಕೋಪಪ್ರಸಾದಾತ್ಮಕಮ್ ।**
**ತತ್ಸರ್ವಂ ಸ್ವಯಮೇವ ಯೋಽಸ್ತಿ ಭಗವಾನ್ ದೃಶ್ಯೋ ನ ಚಾಕ್ಷ್ಣೋರ್ಹರಿ-**
**ಸ್ತಸ್ಯೇದಂ ನಗರಂ ಶುಭಂ ಮಮ ವಿಭೋಃ ಶ್ರೀದಿವ್ಯಪುರ್ಯಾಖ್ಯಯಾ ॥**

ತಾ ॥ ಸುಖದುಃಖಗಳೂ, ಚಿನ್ತಾಪ್ರಶಾನ್ತಿಗಳೂ, ಶೀತೋಷ್ಣಗಳೂ (ಛಾಯಾತಪಗಳೂ) ಕೋಪಪ್ರಸಾದಗಳೂ, ಎಲ್ಲವೂ ತಾನೇ ಆಗಿರುವ ಚಕ್ಷು ಗೋಚರನಲ್ಲದ ಸರ್ವೇಶ್ವರನಾದ ನನ್ನ ಸ್ವಾಮಿಯ ವಾಸಸ್ಥಾನವು ದಿವ್ಯತೀರ್ಥ ಗಳಿಂದ ಪರಿವೃತವಾದ ಶ್ರೀದಿವ್ಯಪುರಿಯೆಂಬ ರಮಣೀಯವಾದ ನಗರವು.

(೩) ನಕರಮುಮ್ ನಾಡುಕಳುಮ್ ಞಾನಮುಮ್
ಮೂಡಮುಮಾಯ್,
ನಿಕರಿಲ್‌ಶೂೞ್ ಶುಡರಾಯಿರುಳಾಯ್ ನಿಲನಾಯ್
ವಿಶುಮ್ಬಾಯ್,
ಶಿಕರಮಾಡಙ್ಗಳ್‌ಶೂೞ್ ತಿರುವಿಣ್ಣಗರ್ ಶೇರ್‌ನ್ದ ಪಿರಾನ್,
ಪುಕರ್‌ಕೊಳ್ ಕೀರ್ತ್ತಿಯಲ್ಲಾಲಿಲ್ಲೈ ಯಾವರ್‌ಕ್ಕುಮ್
ಪುಣ್ಣಿಯಮೇ.

ಪ್ರ॥ ನಕರಮುಮ್-ಪಟ್ಟಣವೂ, ನಾಡುಕಳುಮ್ - ಗ್ರಾಮಗಳೂ, ಞಾನ ಮುಮ್-ಜ್ಞಾನವೂ, ಮೂಡಮುಮ್-ಮೌಢ್ಯವೂ, ಆಯ್-ಆಗಿ, ನಿಕರ್ ಇಲ್- ಸಾದೃಶ್ಯರಹಿತವಾದ, ಶೂೞ್-ವಿಸ್ತೃತವಾದ, ಶುಡರಾಯ್-ಪ್ರಕಾಶವಾಗಿಯೂ, ಇರುಳಾಯ್ - ಅನ್ಧಕಾರವಾಗಿಯೂ, ನಿಲನ್ ಆಯ್-(ಅನ್ಧಕಾರ ಸ್ಥಾನವಾದ)

ಭೂಮಿಯಾಗಿಯೂ, ವಿಶುಮ್ಬಾಯ್ - (ಪ್ರಕಾಶಸ್ಥಾನವಾದ) ಆಕಾಶ (ಸುರ ಲೋಕ) ವಾಗಿಯೂ, ಶಿಕರ ಮಾಡಙ್ಗಳ್ - ಶಿಖರಗಳುಳ್ಳ ಉಪ್ಪರಿಗೆಗಳಿಂದ, ಶೂಝ್-ಪರಿವೃತವಾದ, ತಿರುವಿಣ್ಣಗರ್-ಶ್ರೀದಿವ್ಯಪುರಿಯಲ್ಲಿ, ಶೇರ್ನ್ದ-ನಿತ್ಯವಾಸ ಮಾಡುವ, ಪಿರಾ-ಸರ್ವೇಶ್ವರನ, ಪುಕರ್ಕೊಳ್ - ಔಜ್ಜ್ವಲ್ಯವುಳ್ಳ, ಕೀರ್ತಿ ಯಲ್ಲಾಲ್ -,ಗುಣಪ್ರಶಂಸೆಯನ್ನು ಬಿಟ್ಟರೆ, ಯಾವರ್ಕ್ಕುಮ್ - ಯಾರಿಗೂ, ಪುಣ್ಣೆಯಮ್-ಉಜ್ಜೀವನ ಸಾಧನವಾದ ಸುಕೃತವು, ಇಲ್ಲೈಯೇ-ಇಲ್ಲವಷ್ಟೆ !

( ಸ-ಗಾ-ರ || )—

**ಸರ್ವಂ ಯನ್ನಗರಾತ್ಮಕಂ ಚ ಸಕಲಂ ಗ್ರಾಮಾತ್ಮಕಂ ಯತ್ಸ್ವಯಂ**
**ಜ್ಞಾನಂ ಮೌಢ್ಯಮಪಿ ಸ್ವಯಂ ನಿರವಧಿ ಜ್ಯೋತಿಸ್ತಥಾಽನ್ಧಂ ತಮಃ |**
**ಭೂಲೋಕಸ್ಸುರಲೋಕ ಇತ್ಯಪಿ ಚ ಯಶ್ಶ್ರೀದಿವ್ಯಪುರ್ಯಾಂ ವಿಭು-**
**ರ್ಭಾತಿ ಶ್ರೀಹರಿರಸ್ಯ ಕೀರ್ತಿರತುಲಾ ! ನಾನ್ಯತ್ತು ಪುಣ್ಯಂ ಭವೇತ್ ||**

ತಾ|| ನಗರಗ್ರಾಮಗಳೂ, ಜ್ಞಾನಮೌಢ್ಯಗಳೂ, ಜ್ಯೋತಿರನ್ಧಕಾರಗಳೂ, ಭೂಲೋಕ ಸುರಲೋಕಗಳೂ, ತಾನೇ ಆಗಿ ಉನ್ನತ ಸೌಧಪರಿವೃತವಾದ ಶ್ರೀದಿವ್ಯ ಪುರಿಯಲ್ಲಿ ನಿತ್ಯವಾಸಮಾಡುವ ಸರ್ವೇಶ್ವರನ ಅತ್ಯುಜ್ಜ್ವಲ ದಿವ್ಯಕೀರ್ತಿಪ್ರಶಂಸೆ ಯನ್ನು ಬಿಟ್ಟರೆ ಉಜ್ಜೀವನ ಸಾಧನವು ಇನ್ನು ಯಾವುದೂ ಯಾರಿಗೂ ಇಲ್ಲವಷ್ಟೆ!

(೪) ಪುಣ್ಣಿಯಮ್ ಪಾವಮ್ ಪುಣರ್ಚ್ಚಿ ಪಿರಿವೆನ್ನಿವೈಯಾಯ್,
ಎಣ್ಣಾಮಾಯ್ ಮಱಪ್ಪಾಯುಣ್ಮೈಯಾಯಿನ್ಮೈಯಾ-
ಯಲ್ಲನಾಯ್,
ತಿಣ್ಣಮಾಡಙ್ಗಳ್ಶೂಳ್ ತಿರುವಿಣ್ಣಗರ್ ಚ್ಚೇರ್ನ್ದ ಪಿರಾನ್,
ಕಣ್ಣನಿನ್ನರುಳೇ ಕಣ್ಡುಕೊಣ್ಮಿನ್ಕಳ್ ಕೈತವಮೇ.

ಪ್ರ|| ಪುಣ್ಣಿಯಮ್ಪಾವಮ್- ಪುಣ್ಯಪಾಪಗಳೂ, ಪುಣರ್ಚ್ಚಿ ಪಿರಿವು-ಸಂಶ್ಲೇಷ ವಿಶ್ಲೇಷಗಳೂ, ಎನ್ನಿವೈಯಾಯ್ - ಎಂಬಿವುಗಳಾಗಿ, ಎಣ್ಣಾಮಾಯ್-ಅವುಗಳ ಗಣನವಾಗಿಯೂ, ಮಱಪ್ಪಾಯ್ - ಅವುಗಳ ವಿಸ್ಮರಣವಾಗಿಯೂ, ಉಣ್ಮೈ ಯಾಯ್ - (ವಸ್ತುಗಳ) ಸದ್ಭಾವವಾಗಿಯೂ, ಇನ್ಮೈಯಾಯ್ - ಅಸದ್ಭಾವ ವಾಗಿಯೂ, ಅಲ್ಲನಾಯ್ - ಕರ್ಮವಶ್ಯನಲ್ಲದವನಾಗಿಯೂ, ತಿಣ್ಣಮಾಡಙ್ಗಳ್- ದೃಢವಾದ ಉಪ್ಪರಿಗೆ ಮನೆಗಳಿಂದ, ಶೂಝ್ - ಪರಿವೃತವಾದ, ತಿರುವಿಣ್ಣಗರ್-

ಶ್ರೀದಿವ್ಯಪುರಿಯಲ್ಲಿ, ಶೇರ್‌ನ್ದ-ನಿತ್ಯವಾಸಮಾಡುವ, ಪಿರಾ೯-ಸರ್ವೇಶ್ವರನಾಗಿರುವ, ಕಣ್ಣ೯ – ಶ್ರೀಕೃಷ್ಣನ, ಇನ್ನರುಳೇ – ಭೋಗ್ಯತಮವಾದ ಕೃಪೆಯನ್ನೇ, ಕಣ್ಣು ಕೊಣ್ಡ್ರ೯ಕಳ್ – ಉತ್ತಾರಕವೆಂದು ಎಣಿಸಿರಿ. ಕೈತವಮೋ–ಇದು ಕಪಟವೋ ? (ಇದೇ ಪರಮಾರ್ಥವೆಂದು ತಿಳಿಯಿರಿ.)

( ಸ–ಗಾ–ರ || )—

ಪುಣ್ಯಂ ಪಾಪಮಿದಂ ಚ ಸಙ್ಗವಿರಹೌ ತತ್ತತ್ಸ್ಮೃತಿರ್ವಿಸ್ಮೃತಿ–
ಸ್ಸತ್ಯಂ ಚಾನೃತರೂಪಮೇತದಖಿಲಂ ಭೂತ್ವಾಽಪಿ ನ ಸ್ಯಾತ್ತಥಾ |
ಯೋಽಸೌ ಶ್ರೀಪತಿರಚ್ಯುತೋ ಮಮ ವಿಭುಶ್ರೀದಿವ್ಯಪುರ್ಯಾಂ ಹರಿಃ
ಕೃಷ್ಣಸ್ತಸ್ಯ ಕೃಪಾಂ ಭಜಧ್ವಮತುಲಾಂ! ಕಿಂ ಸ್ಯಾದಿದಂ ಕೈತವಮ್?||

ತಾ|| ಪುಣ್ಯಪಾಪಗಳೂ, ಸಂಶ್ಲೇಷವಿಶ್ಲೇಷಗಳೂ, ಸ್ಮರಣವಿಸ್ಮರಣಗಳೂ, ಸದ್ಭಾವಾಸದ್ಭಾವಗಳೂ, ತಾನೇ ಆಗಿ ಅಕರ್ಮವಶ್ಯನಾಗಿರುವ ಶ್ರೀದಿವ್ಯಪುರೀಶ್ವರನಾದ ಶ್ರೀಕೃಷ್ಣನ ಕೃಪಾತಿಶಯವನ್ನೇ ಉತ್ತಾರಕವೆಂದು ಎಣಿಸಿರಿ! ಇದು ಕಪಟವೇ ? (ಇದೇ ಪರಮಾರ್ಥವೆಂದು ತಾತ್ಪರ್ಯ.)

(೫) ಕೈತವಮ್ ಶೆಮ್ಮೈ ಕರುಮ್ಮೈ ವೆಳುಮ್ಮೈಯುಮಾಯ್,
ಮೆಯ್‌ಪೊಯ್ಯಿಳಮ್ಮೈ ಮುದುಮ್ಮೈ ಪುದುಮ್ಮೈ
ಪಳಮ್ಮೈಯುಮಾಯ್,
ಶೆಯ್ದ ತಿಣ್‌ಮದಿಳ್‌ಶೂಳ್ ತಿರುವಿಣ್ಣಗರ್
ಚ್ಚೇರ್‌ನ್ದ ಪಿರಾ೯,
ಪೆಯ್ದ ಕಾವುಕಣ್ಡೀರ್ ಪೆರುನ್ದೇವುಡೈ ಮೂವುಲಕೇ.

ಪ್ರ|| ಕೈತವಮ್–ಕೌಟಿಲ್ಯವೂ, ಶೆಮ್ಮೈ- ಆರ್ಜವವೂ, ಕರುಮ್ಮೈ–ಕಪ್ಪು ಬಣ್ಣವೂ, ವೆಳುಮ್ಮೈಯುಮಾಯ್ – ಬಿಳುಪೂ ಆಗಿ, ಮೆಯ್ ಪೊಯ್–ಸತ್ಯವೂ ಅನೃತವೂ, ಇಳಮ್ಮೈ ಮುದುಮ್ಮೈ-ಯೌವನ ವಾರ್ಧಕಗಳೂ, ಪುದುಮ್ಮೈ ಪಳಮ್ಮೈಯುಮಾಯ್-ನೂತನತ್ವ ಪುರಾತನತ್ವಗಳೂ ತಾನೇ ಆಗಿ, ಶೆಯ್ದ-ಚೆನ್ನಾಗಿ ರಚಿಸಲ್ಪಟ್ಟ, ತಿಣ್ಮದಿಳ್–ಸುದೃಢ ಪ್ರಾಕಾರಗಳಿಂದ, ಶೂಳ್–ಪರಿವೃತವಾದ, ತಿರುವಿಣ್ಣಗರ್–ಶ್ರೀದಿವ್ಯಪುರಿಯಲ್ಲಿ, ಶೇರ್‌ನ್ದ–ಸೇರಿ ನಿತ್ಯವಾಸಮಾಡುವ, ಪಿರಾ೯–ಸರ್ವೇಶ್ವರನು, ಪೆಯ್ದ–ಮಾಡಿ ಇಟ್ಟ, ಕಾವುಕಣ್ಡೀರ್–ಲೀಲೋದ್ಯಾನವಲ್ಲವೇ, ಪೆರುನ್ದೇವುಡೈ–ಮಹನೀಯರಾದ ಬ್ರಹ್ಮಾದಿ ದೇವತೆಗಳುಳ್ಳ, ಮೂವುಲಕೇ–ತ್ರೈಲೋಕ್ಯವೂ.

( ಸ-ಗಾ-ರ || )—

ಕೌಟಿಲ್ಯಂ ಚ ತಥಾऽರ್ಜವಂ ಚ ಸಕಲಂ ನೀಲತ್ವಧಾವಳ್ಯಕೇ
ಸತ್ಯಾಸತ್ಯಮಯಂ ಚ ಯೌವನಜರೇ ನೂತ್ನಂ ಚ ಜೀರ್ಣಂ ಚ ಯತ್ ।
ತತ್ಸರ್ವಂ ಸ್ವಯಮೇವ ಯೋ ಮಮ ವಿಭುಃ ಶ್ರೀದಿವ್ಯಪುರ್ಯಾಂ ಹರಿ-
ಸ್ತಸ್ಯೋದ್ಯಾನಮಿದಂ ಜಗತ್ತ್ರಯಮಹೋ ! ಬ್ರಹ್ಮಾದಿದೇವಾಶ್ರಿತಮ್ ||

ತಾ|| ಕೌಟಿಲ್ಯಾರ್ಜವಗುಣಗಳೂ, ನೀಲತ್ವಧವಳತ್ವಗಳೂ, ಸತ್ಯಾಸತ್ಯಗಳೂ, ಯೌವನ ವಾರ್ಧಕಗಳೂ, ನೂತನತ್ವಪುರಾತನತ್ವಗಳೂ ತಾನೇ ಆಗಿ, ಸುದೃಢ ಪ್ರಾಕಾರಪರಿವೃತವಾದ ಶ್ರೀದಿವ್ಯಪುರಿಯಲ್ಲಿ ನಿತ್ಯವಾಸಮಾಡುವ ಸರ್ವೇಶ್ವರನು ಮಾಡಿ ಇಟ್ಟಿರುವ ಲೀಲೋದ್ಯಾನವಲ್ಲವೇ ಬ್ರಹ್ಮಾದಿದೇವತೆಗಳಿಗೆ ವಾಸಸ್ಥಾನ ವಾದ ಈ ತ್ರೈಲೋಕ್ಯವು !

(೭) ಮೂವುಲಕಙ್ಗಳುಮಾಯ್ ಅಲ್ಲನಾಯ್ ಉಕಪ್ಪಾಯ್ ಮುನಿವಾಯ್
ಪೂವಿಲ್ ವಾೞ್ಮಕಳಾಯ್ ತವ್ವೈಯಾಯ್
ಪುಕೞಾಯ್ ಪ್ಪೞಿಯಾಯ್,
ತೇವರ್ಮೇವಿತ್ತೊೞುಮ್ ತಿರುವಿಣ್ಣಗರ್ ಚ್ಚೇರ್ನ್ದ ಪಿರಾನ್,
ಪಾವಿಯೇನ್ಮನತ್ತೇ ಉಱೈಕಿನ್ಱ ಪರಞ್ಜುಡರೇ.

ಪ್ರ|| ಮೂವುಲಕಙ್ಗಳುಮಾಯ್ – ತ್ರೈಲೋಕ್ಯವೂ ಆಗಿ, ಅಲ್ಲನಾಯ್– ತದ್ವ್ಯತಿರಿಕ್ತವಾದ ನಿತ್ಯವಿಭೂತಿಯುಳ್ಳವನಾಗಿಯೂ, ಉಕಪ್ಪಾಯ್ ಮುನಿವಾಯ್–ಪ್ರೀತಿದ್ವೇಷಗಳಾಗಿಯೂ, ಪೂವಿಲ್‌ವಾೞ್ ಮಕಳಾಯ್–ಪದ್ಮವಾಸಿನಿಯಾದ ಲಕ್ಷ್ಮಿಯೂ ಆಗಿ, ತವ್ವೈಯಾಯ್ – (ದಾರಿದ್ರ್ಯಾಭಿಮಾನಿನಿಯಾದ) ಜ್ಯೇಷ್ಠಾದೇವಿಯೂ ಆಗಿ, ಪುಕೞಾಯ್–ಸ್ತೋತ್ರ (ಕೀರ್ತಿಪ್ರಶಂಸೆ) ಆಗಿಯೂ, ಪ್ಪೞಿಯಾಯ್–ನಿಂದೆಯಾಗಿಯೂ ಇರುವ, ತೇವರ್‌ಮೇವಿತ್ತೊೞುಮ್–ದಿವ್ಯಸೂರಿಗಳು ಪ್ರೀತಿಯಿಂದ ಸೇವಿಸುತ್ತಿರುವ, ತಿರುವಿಣ್ಣಗರ್ – ಶ್ರೀ ದಿವ್ಯಪುರಿಯಲ್ಲಿ, ಶೇರ್‌ನ್ದ–ಸೇರಿ ವಾಸಮಾಡುವ, ಪಿರಾನ್–ಸರ್ವೇಶ್ವರನು, ಪಾವಿಯೇನ್–ಪಾಪಿನಿಯಾದ ನನ್ನ, ಮನತ್ತೇ – ಮನಸ್ಸಿನಲ್ಲಿ, ಉಱೈಕಿನ್ಱ – ನಿತ್ಯವಾಸಮಾಡುವ, ಪರಂಶುಡರೇ–ಪರಜ್ಯೋತಿರ್ಮಯನೇ !

( ಸ-ಗಾ-ರ ॥ )—

ತ್ರೈಲೋಕ್ಯಂ ಸಕಲಂ ಚ ಯೋ ನ ಚ ತಥಾ ರಾಗೋಽಪಿ ವೈರಂ ಸ್ವಯಂ
ಲಕ್ಷ್ಮೀಶ್ಚಾಪಿ ಸರೋಜದಿವ್ಯಭವನಾ ಜ್ಯೇಷ್ಠಾಽಪ್ಯಲಕ್ಷ್ಮೀಸ್ಸ್ವಯಮ್।
ಸ್ತೋತ್ರಂ ನಿನ್ದನಮಪ್ಯಯಂ ಸ್ವಯಮಹೋ ! ಶ್ರೀದಿವ್ಯಪುರ್ಯಾಂ ಹರಿ-
ರ್ಭಾತಿ ಶ್ರೀಪತಿರಚ್ಯುತೋಽಪ್ಯಘಿನಿ ಮೇ ಜ್ಯೋತಿಃ ಪರಂ ಮಾನಸೇ ॥

ತಾ॥ ತ್ರೈಲೋಕ್ಯವೂ (ಲೀಲಾವಿಭೂತಿಯೂ) ನಿತ್ಯವಿಭೂತಿಯೂ, ಪ್ರೀತಿ ದ್ವೇಷಗಳೂ, ಲಕ್ಷ್ಮೀದೇವಿಯೂ ಜ್ಯೇಷ್ಠಾದೇವಿಯೂ, ಸ್ತುತಿನಿಂದೆಗಳೂ ತಾನೇ ಆಗಿ ನಿಂತು, ದಿವ್ಯಸೂರಿಸೇವಿತವಾದ ಶ್ರೀದಿವ್ಯಪುರಿಯಲ್ಲಿ ವಾಸಮಾಡುವ ಸರ್ವೇಶ್ವರನೇ ಅಲ್ಲವೆ ಪಾಪಿನಿಯಾದ ನನ್ನ ಮನಸ್ಸಿನಲ್ಲಿ ನಿತ್ಯವಾಸಮಾಡುವ ಪರಜ್ಯೋತಿರ್ಮಯನು !

(೭) ಪರಂಶುಡರುಡಮ್ಬಾಯ್ಯುೞಕ್ಕು ಪ್ಪದಿತ್ತುವುಡಮ್ಬಾಯ್,
ಕರನ್ದುಮ್ ತೋನ್ಱಿಯುಮ್ ನಿನ್ಱುಮ್
ಕೈತವಙ್ಗಳ್‌ಶೆಯ್ದುಮ್, ವಿಣ್ಣೋರ್
ಶಿರಙ್ಗಳಾಲ್ ವಣಙ್ಗುಮಾ ತಿರುವಿಣ್ಣಗರ್ ಶೇರ್ನ್ದಪಿರಾನ್,
ವರಙ್ಕೊಳ್ ಪಾದಮಲ್ಲಾಲಿಲ್ಲೈ ಯಾವರ್ಕ್ಕುಮ್ ವನ್‌ಶರಣೇ.

ಪ್ರ॥ ಪರಂಶುಡರ್ ಉಡಮ್ಬಾಯ್-ಅಪ್ರಾಕೃತವಾದ ಪರಜ್ಯೋತೀರೂಪನಾಗಿಯೂ, ಅೞುಕ್ಕುಪ್ಪದಿತ್ತುವುಡಮ್ಬಾಯ್ – ಮಾಲಿನ್ಯಭರಿತವಾದ ಪ್ರಾಕೃತ ಜಗದಾಕಾರವುಳ್ಳವನಾಗಿಯೂ, ಕರನ್ದುಮ್ – (ಅನಾಶ್ರಿತರಿಗೆ) ಪ್ರಕಾಶರಹಿತನಾಗಿಯೂ, ತೋನ್ಱಿಯುಮ್-(ಆಶ್ರಿತರಿಗೆ) ಪ್ರಕಾಶಮಾನನಾಗಿಯೂ, ನಿನ್ಱುಮ್-(ಆಶ್ರಿತರಿಗೆ) ಸ್ಥಿರನಾಗಿಯೂ, ಕೈತವಙ್ಗಳ್‌ಶೆಯ್ದುಮ್ – (ಅನಾಶ್ರಿತರಿಗೆ) ಅಸ್ಥಿರನಾಗಿ ಕಪಟವೃತ್ತಿಗಳುಳ್ಳವನಾಗಿಯೂ, ಆಯ್-ಆಗಿ, ವಿಣ್ಣೋರ್-ಬ್ರಹ್ಮರುದ್ರಾದಿ ದೇವತೆಗಳು, ಶಿರಙ್ಗಳಾಲ್-ಶಿರಸ್ಸುಗಳಿಂದ, ವಣಙ್ಗುಮ್-ಸಾಷ್ಟಾಂಗ ನಮಸ್ಕಾರ ಮಾಡುವಂತೆ, ತಿರುವಿಣ್ಣಗರ್-ಶ್ರೀದಿವ್ಯಪುರಿಯಲ್ಲಿ, ಶೇರ್ನ್ದ-ಸೇರಿವಾಸಮಾಡುತ್ತಿರುವ, ಪಿರಾನ್ - ಸರ್ವೇಶ್ವರನ, ವರಙ್ಕೊಳ್ – ಶ್ರೈಷ್ಠ್ಯವುಳ್ಳ, ಪಾದಮ್ ಅಲ್ಲಾಲ್-ಪಾದಗಳನ್ನು ಬಿಟ್ಟರೆ, ಯಾವರ್ಕ್ಕುಮ್-ಸರ್ವಚೇತನರಿಗೂ,ವನ್(ವಲ್) ಶರಣ್–ಪ್ರಬಲವಾದ ರಕ್ಷಕವಸ್ತುವು, ಇಲ್ಲೈಯೇ-ಯಾವುದೂ ಇಲ್ಲವಷ್ಟೆ !

( ಸ–ಗಾ–ರ || )—

ಜ್ಯೋತಿಶ್ಚಾಪಿ ಪರಂ ಸ್ವಯಂ ಹಿ ಮಲಿನಂ ಚೇದಂ ಜಗದ್ಭಾಸ್ವರಂ
ಸರ್ವತ್ರಾಪಿ ಚ ಗುಪ್ತಮಪ್ಯಚಲಮಪ್ಯೇವಂ ಹಿ ಮಾಯಾತ್ಮಕಮ್ |
ದೇವಾದ್ಯೈರಪಿ ಸೇವಿತೇ ಹಿ ನಗರೇ ಶ್ರೀದಿವ್ಯಪುರ್ಯಾಹ್ವಯೇ
ಭಾತಿ ಶ್ರೀಪತೇರಸ್ಯ ಪಾದಯುಗಳಂ ಸೇವ್ಯಂ! ನ ಚಾನ್ಯನ್ನೃಣಾಮ್ ||

ತಾ|| ಅಪ್ರಾಕೃತವಾದ ಜೋತಿರ್ಮೂರ್ತಿಯಾಗಿಯೂ, ಪ್ರಾಕೃತಜಗದ್ರೂಪಿಯಾಗಿಯೂ, ಪ್ರಕಾಶರಹಿತನಾಗಿಯೂ ಪ್ರಕಾಶಮಾನನಾಗಿಯೂ, ಸ್ಥಿರನಾಗಿಯೂ ಅಸ್ಥಿರನಾಗಿಯೂ, ಈ ಪ್ರಕಾರ ನಾನಾರೂಪಿಯಾಗಿ ದೇವತೆಗಳಿಂದ ಸೇವ್ಯವಾದ ಶ್ರೀದಿವ್ಯಪುರಿಯಲ್ಲಿ ವಾಸವಾಡುತ್ತಿರುವ ಸರ್ವೇಶ್ವರನ ಶ್ರೇಷ್ಠವಾದ ಪಾದಗಳನ್ನು ಬಿಟ್ಟರೆ ಇನ್ನು ಯಾವುದೂ ರಕ್ಷಕವಾದ ವಸ್ತುವು ಯಾರಿಗೂ ಇಲ್ಲವಷ್ಟೆ !

(೮) ವನ್ ಶರಣ್ ಶುರರ್ಕ್ಕಾಯಶುರರ್ಕ್ಕು
ವೆಙ್ಕೂಱ್ಱಮುಮಾಯ್,
ತನ್ ಶರಣ್ ನಿೞಲ್ಕೀೞುಲಕಮ್ ವೈತ್ತುಮ್ ವೈಯಾದುಮ್,
ತನ್ ಶರಣ್ ತಿಶೈಕ್ಕು ತ್ತಿರುವಿಣ್ಣಕರ್ ಚ್ಚೇರ್ನ್ದಪಿರಾನ್,
ಎನ್ ಶರಣ್ ಕಣ್ಣನೆನ್ನೈ ಯಾಳುಡೈ ಯೆನ್ನಪ್ಪನೇ.

ಪ್ರ|| ಶುರರ್ಕ್ಕು – (ಅನುಕೂಲರಾದ) ದೇವತೆಗಳಿಗೆ, ವನ್(ವಲ್) ಶರಣ್– ಪ್ರಬಲವಾದ ರಕ್ಷಕವಸ್ತುವಾಗಿ, ಆಯ್–ಆಗಿ, ಅಶುರರ್ಕ್ಕು–(ಪ್ರತಿಕೂಲರಾದ) ಅಸುರರಿಗೆ, ವೆಮ್–ಕ್ರೂರವಾದ, ಕೂಱ್ಱಮುಮ್ ಆಯ್–ಮೃತ್ಯುವಾಗಿಯೂ, ಉಲಕಮ್–ಅನ್ತಹ ಜನರನ್ನು, ತನ್ಶರಣ್ ನಿೞಲ್ಕೀೞ್ – ತನ್ನ ಪಾದಚ್ಛಾಯೆಯಲ್ಲಿ, ವೈತ್ತುಮ್–(ಆಶ್ರಿತರನ್ನು) ಇಟ್ಟುಕೊಂಡೂ, ವೈಯಾದುಮ್–(ಅನಾಶ್ರಿತರನ್ನು) ಇಡದೆಯೂ, ಆಯ್–ಇರುವವನಾಗಿ, ತಿರುವಿಣ್ಣಕರ್–ಶ್ರೀದಿವ್ಯಪುರಿಯಲ್ಲಿ, ಶೇರ್ನ್ದ–ಸೇರಿವಾಸಮಾಡುತ್ತಿರುವ, ಪಿರಾನ್–ಸ್ವಾಮಿಯಾದ, ಎನ್ಕಣ್ಣನ್–ನನ್ನ ಶ್ರೀಕೃಷ್ಣನಾಗಿ, ಎನ್ನೈ ಆಳುಡೈ–ನನ್ನನ್ನು ದಾಸನಾಗಿಮಾಡಿಕೊಂಡ, ಎನ್ನಪ್ಪನೇ–ನನ್ನ ಸ್ವಾಮಿಯೇ, ಎನ್ಶರಣ್–ನನಗೆ ಶರಣ್ಯನು.

( ಸ-ಗಾ-ರ || )—

ದೇವಾನಾಂ ಚ ಶರಣ್ಯಮಪ್ರತಿಹತಂ ! ಸರ್ವಾಸುರಾಣಾಂ ರಿಪು-
ಹರ್ನ್ತಾ ! ಚಾಪಿ ಜಗತ್ತ್ರಯಸ್ಯ ಶರಣಾ ಸೇವ್ಯಂ ನ ಸೇವ್ಯಾ ಚ ಯಃ |
ಏವಂ ದಕ್ಷಿಣದಿಕ್ಪ್ರಕಾಶಿ ಶರಣಂ ಶ್ರೀದಿವ್ಯಪುರ್ಯಾಂ ಹರಿಃ
ಕೃಷ್ಣೋ ಮೇ ಪ್ರಭುರಸ್ತಿ ! ಮೇಽಸ್ತು ಶರಣಂ ನಿತ್ಯಂ ಚ ಸೇವ್ಯೋ ಮಮ||

ತಾ|| ದೇವತೆಗಳಿಗೆ ಶರಣ್ಯನಾಗಿಯೂ ಅಸುರರಿಗೆ ಮೃತ್ಯುವಾಗಿಯೂ, ಆಶ್ರಿತರನ್ನು ತನ್ನ ಪಾದಚ್ಛಾಯೆಯಲ್ಲಿ ಇಟ್ಟು ಅನಾಶ್ರಿತರನ್ನು ಇಡದೆ ಶ್ರೀದಿವ್ಯ ಪುರಿಯಲ್ಲಿ ವಾಸಮಾಡುತ್ತಿರುವ ಸ್ವಾಮಿಯಾದ ನನ್ನ ಶ್ರೀ ಕೃಷ್ಣರೂಪಿಯಾದ ಭಗವನ್ತನೇ ನನ್ನನ್ನು ದಾಸನಾಗಿ ಮಾಡಿಕೊಂಡಿರುವ ನನ್ನ ಶರಣ್ಯನು.

(೯) ಎನ್ನಪ್ಪನೆನಕ್ಕಾಯಿಕುಳಾಯೆನ್ನೈಪ್ಪೆಱ್ಱವಳಾಯ್,
ಪೊನ್ನಪ್ಪನ್ ಮಣಿಯಪ್ಪನ್ ಮುತ್ತಪ್ಪನೆನ್ನಪ್ಪನುಮಾಯ್,
ಮಿನ್ನಪೊನ್ಮದಿಳ್ ಶೂೞ್ ತಿರುವಿಣ್ಣಕರ್ ಚ್ಚೇರ್ನ್ದವಪ್ಪನ್,
ತನೊಪ್ಪಾರಿಲ್ಲಪ್ಪನ್ ತನ್ದನನ್ ತನತಾಳ್‌ನಿೞಲೇ.

ಪ್ರ|| ಎನಕ್ಕು-ನನಗೇ, ಎನ್ ಅಪ್ಪನ್ ಆಯ್-ನನ್ನ ಜನಕನಾಗಿಯೂ ಆಗಿ, ಇಕುಳಾಯ್ ನನ್ನಪೋಷಣ ತತ್ಪರೆಯಾದ ಧಾತ್ರಿಯಾಗಿಯೂ ಆಗಿ, ಎನ್ನೈಪ್ಪೆಱ್ಱವಳಾಯ್-ನನ್ನ ಹೆತ್ತತಾಯಿಯಾಗಿಯೂ ಆಗಿ, ಪೊನ್ ಅಪ್ಪನ್-ಸುವರ್ಣದಂತೆ ರಮಣೀಯವಾಗಿ ಪ್ರಕಾಶಮಾನನಾದ ಸ್ವಾಮಿಯಾಗಿಯೂ, ಮಣಿಯಪ್ಪನ್-ರತ್ನದಂತೆ ತೇಜಸ್ಸಿನಿಂದ ಪ್ರಕಾಶಿಸುವ ಸ್ವಾಮಿಯಾಗಿಯೂ, ಮುತ್ತು ಅಪ್ಪನ್-ಮುತ್ತಿನಂತೆ ಶೀತಳವಾಗಿಯೂ ನಿರ್ಮಲವಾಗಿಯೂ ಪ್ರಕಾಶಿಸುವ ಪ್ರಭುವಾಗಿಯೂ, ಎನ್ ಅಪ್ಪನುಮಾಯ್ - (ಹೀಗೆ) ನನಗೆ ಉಪಕಾರಕನಾದ ಸ್ವಾಮಿಯೂ ಆಗಿ, ಮಿನ್ನ-ಪ್ರಕಾಶಿಸುವ, ಪೊನ್‌ಮದಿಳ್ - ಸುವರ್ಣಮಯಪ್ರಾಕಾರಗಳಿಂದ, ಶೂೞ್-ಪರಿವೃತವಾದ, ತಿರುವಿಣ್ಣಕರ್-ಶ್ರೀದಿವ್ಯಪುರಿಯಲ್ಲಿ, ಶೇರ್ನ್ದ-ಸೇರಿವಾಸಮಾಡುತ್ತಿರುವ, ಅಪ್ಪನ್-ಸ್ವಾಮಿಯು, ತನ್ ಒಪ್ಪಾರ್ ಇಲ್ ಅಪ್ಪನ್ ತನಗೆ ಸಮಾನರಿಲ್ಲದ ಮಹೋಪಕಾರಕನಾದ ಸ್ವಾಮಿಯು, ತನ್ ತಾಳ್-ತನ್ನ ಪಾದಗಳ, ನಿೞಲ್- ಛಾಯೆಯನ್ನು, ತನ್ದನನ್-(ನನಗೆ) ಅನುಗ್ರಹಿಸಿದನು.

( ಸ–ಗಾ–ರ ॥ )—

ಯೋಽಸೌ ಮೇಽಸ್ತಿ ಪಿತಾ ಚ ಮೇಽಸ್ತಿ ಜನನೀ ಧಾತ್ರೀ ಚ ಸೌವರ್ಣಭಾ-
ಸ್ಸ್ವಾಮೀ ರತ್ನಮಹೋಜ್ಜ್ವಲಸ್ಸ್ವಯಮಸೌ ಮುಕ್ತಾಮಯೋ
ಮೇ ಪ್ರಭುಃ ।
ಪ್ರಾಕಾರೈಶ್ಚ ಹಿರಣ್ಮಯೈರ್ವಿಲಸಿತೇ ಶ್ರೀದಿವ್ಯಪುರ್ಯಾಹ್ವಯೇ
ಸೋಽಯಂ ಮೇ ನಗರೇ ಸ್ವಪಾದಕಮಲಚ್ಛಾಯಾಂ ಶರಣ್ಯಾನುದಾತ್ ॥

ತಾ॥ ನನ್ನ ಜನಕನಾಗಿಯೂ, ಜನನಿಯಾಗಿಯೂ, ಧಾತ್ರಿಯಾಗಿಯೂ, ಸುವರ್ಣದಂತೆ ರಮಣೀಯವಾಗಿಯೂ, ರತ್ನದಂತೆ ತೇಜೋನಿಧಿಯಾಗಿಯೂ, ಮುತ್ತಿನಂತೆ ಶೀತಳವಾಗಿಯೂ ನಿರ್ಮಲವಾಗಿಯೂ ಇರುವ ಮೂರ್ತಿಯುಳ್ಳ ನನ್ನ ಸ್ವಾಮಿಯು ಸುವರ್ಣಮಯ ಪ್ರಾಕಾರಪರಿವೃತವಾದ ಶ್ರೀದಿವ್ಯಪುರಿಯಲ್ಲಿ ವಾಸ ಮಾಡುತ್ತಿರುವ ಸ್ವಾಮಿಯು, ತನಗೆ ಸಮಾನರಿಲ್ಲದ ಮಹೋಪಕಾರಕನಾದ ಸ್ವಾಮಿಯು, ತನ್ನ ಪಾದಗಳ ಛಾಯೆಯನ್ನು ನನಗೆ (ಉಜ್ಜೀವನಕ್ಕಾಗಿ) ಅನುಗ್ರಹಿಸಿದನು.

(೧೦) ನಿೞಲ್ ವೆಯ್ಯಿಲ್ ಶಿಱುಮೈ ಪೆರುಮೈ ಕುಱುಮೈ
ನೆಡುಮೈಯುಮಾಯ್,
ಶುೞಲ್ವನ ನಿಱ್ಪನ ಮಱ್ಱುಮಾಯವೈಯಲ್ಲನುಮಾಯ್,
ಮೞಲೈವಾಯ್ ವಣ್ಡುವಾೞ್ ತಿರುವಿಣ್ಣಗರ್ ಮನ್ನುಪಿರಾನ್,
ಕೞಲ್ಕಳನ್ಱಿ ಮಱ್ಱೋರ್ಕಳೈಕಣಿಲಮ್ ಕಾಣ್ಮಿನ್ಕಳೇ.

ಪ್ರ॥ ನಿೞಲ್ – (ತಾಪಶಾನ್ತಿಕರವಾದ) ಛಾಯೆಯೂ, ವೆಯ್ಯಿಲ್–(ತಾಪಕರವಾದ) ಆತಪವೂ (ಬಿಸಿಲೂ), ಶಿಱುಮೈ – ಅಣುತ್ವವೂ, ಪೆರುಮೈ – ಮಹತ್ತ್ವವೂ, ಕುಱುಮೈ–ಹ್ರಸ್ವತ್ವವೂ, ನೆಡುಮೈ–ದೀರ್ಘತ್ವವೂ, ಆಯ್–ಆಗಿ, ಶುೞಲ್ವನ ನಿಱ್ಪನ–ಚರಸ್ಥಿರರೂಪಿಯಾದ, ಮಱ್ಱುಮ್–(ಮತ್ತೂ) ಅನೇಕ ಪದಾರ್ಥಗಳೂ, ಆಯ್–ಆಗಿ, ಅವೈ ಅಲ್ಲನುಮಾಯ್–ಅವುಗಳ ಸ್ವಭಾವವಿಲ್ಲದವನಾಗಿಯೂ ಆಗಿ, ಮೞಲೈ–ಮನೋಹರವಾದ, ವಾಯ್–ವಾಗ್ವ್ಯಾಪಾರವುಳ್ಳ (ಝುಂಕಾರಗೀತವುಳ್ಳ), ವಣ್ಡು–ಭ್ರಮರಗಳು, ವಾೞ್ –(ಸ್ವಭೋಗ್ಯವಸ್ತುಲಾಭದಿಂದ) ಬಾಳುವ, ತಿರುವಿಣ್ಣಗರ್ – ಶ್ರೀ ದಿವ್ಯಪುರಿಯಲ್ಲಿ, ಮನ್ನು–ನಿತ್ಯವಾಸ ಮಾಡುವ, ಪಿರಾನ್–ಸರ್ವೇಶ್ವರನ, ಕೞಲ್ಕಳ್–ಪಾದಗಳನ್ನು, ಅನ್ಱಿ–ಹೊರತು,

ಮತ್ತು ಓರ್-ಬೇರೆ ಒಂದು, ಕಳೈಕಣ್-ರಕ್ಷಕವಸ್ತುವನ್ನು (ಶರಣ್ಯವಸ್ತುವನ್ನು), ಇಲವ್ - (ನಾವು) ಪಡೆದಿಲ್ಲ, ಕಾಣ್ಮಿನ್ಕಳೇ - (ಇದನ್ನು) ಕಂಡು ಹಿಡಿಯಿರಿ (ನಿರೂಪಿಸಿ ತಿಳಿದುಕೊಳ್ಳಿರಿ).

( ಸ-ಗಾ-ರ || )—

ಛಾಯಾಽಪಿ ಶ್ರಮಹಾರಿಣೀ ನ ಹಿ ಹರಿಸ್ತ್ವಾಪಾವಹಸ್ತ್ವಾತಪೋ
ಯೋಽಣುಸ್ಸೋಪಿ ಮಹಾನ್ ವಿಭಾತಿ ಸಪದಿ ಹ್ರಸ್ವೋಽಪಿ
ದೀರ್ಘೋಽಸ್ತಿ ಯಃ |
ಏವಂ ಭಾತಿ ಚರಾಚರಂ ಚ ನ ತಥಾ! ಶ್ರೀದಿವ್ಯಪುರ್ಯ್ಯಾಂ ಹರೇಃ!
ಪಾಸ್ಯಂ ತತ್ಪದಯುಗ್ಮಮೇವ ಶರಣಂ! ನಾನ್ಯದ್ಭವೇತ್ ಪಶ್ಯತ ||

ತಾ|| ಛಾಯಾತಪಗಳೂ, ಅಣುತ್ವಮಹತ್ತ್ವಗಳೂ, ಹ್ರಸ್ವತ್ವದೀರ್ಘತ್ವಗಳೂ, ಚರಸ್ಥಿರರೂಪಿ ಸಕಲಪದಾರ್ಥಗಳೂ ತಾನೇ ಆಗಿ, ಅವುಗಳ ಸ್ವಭಾವವಿಲ್ಲದವನಾಗಿಯೂ ಇರುವ ಸರ್ವೇಶ್ವರನೇ ಮನೋಹರ ಝುಂಕಾರಗೀತವುಳ್ಳ ಭ್ರಮರಗಳಿಗೆ ಭೋಗಸ್ಥಾನವಾದ ಶ್ರೀದಿವ್ಯಪುರಿಯಲ್ಲಿ ನಿತ್ಯವಾಸಮಾಡುವ ಸ್ವಾಮಿಯಾದುದರಿಂದ ಅವನ ಪಾದಗಳನ್ನು ಹೊರತು ಬೇರೆ ಒಂದು ಶರಣ್ಯವಸ್ತುವನ್ನು ನಾವು ಪಡೆದಿಲ್ಲ—ಇದನ್ನು ಎಲ್ಲರೂ ನಿರೂಪಿಸಿ ತಿಳಿಯಿರಿ.

(೧೧) ಕಾಣ್ಮಿನ್ಕಳುಲಕೀರೆನ್ರು ಕಣ್‌ಮುಕಪ್ಪೇ ನಿಮಿರ್‌ನ್ದ,
ತಾಳಿಣೈಯನ್‌ತನ್ನೈ ಕ್ಕುರುಕೂರ್‌ಚ್ಚಡಕೋಪನ್ ಶೊನ್ನ,
ಆಣೈಯಾಯಿರತ್ತು ತ್ತಿರುವಿಣ್ಣಗರ್ ಪ್ಪತ್ತುಮ್‌ವಲ್ಲಾರ್,
ಕೋಣೈಯಿನ್ರಿ ವಿಣ್ಣೋರ್‌ಕ್ಕೆನ್ರುಮಾವರ್ ಕುರವರ್‌ಕಳೇ.

ಪ್ರ|| ಉಲಕೀರ್ - ಲೋಕದಲ್ಲಿರುವವರೇ !, ಕಾಣ್ಮಿನ್ಕಳ್ - (ಇದನ್ನು) ನೋಡಿರಿ, ಎನ್ರು-ಎಂದು, ಕಣ್‌ಮುಕಪ್ಪೇ-(ಪರಸ್ಪರವಿರುದ್ಧರಾದವರ) ಕಣ್ಣೆದುರಿಗೆ, ನಿಮಿರ್‌ನ್ದ-ಬೆಳೆದ, ತಾಳಿಣೈಯನ್ ತನ್ನೈ-ಪಾದಗಳುಳ್ಳ (ತ್ರಿವಿಕ್ರಮನಂತೆ ಬೆಳೆದ) ಸರ್ವೇಶ್ವರನನ್ನು, ಕುರುಕೂರ್ ಶಡಕೋಪನ್-ಕುರುಕಾಪುರಿಯ ಶಠಾರಿಮುನಿಯು, ಶೊನ್ನ-ಸ್ತುತಿಸಿರಚಿಸಿದ, ಆಣೈ-(ಭಗವನ್ತನ) ಆಜ್ಞಾರೂಪವಾದ, ಆಯಿರತ್ತು-ಸಹಸ್ರಪದ್ಯಮಾಲೆಯೊಳು, ತಿರುವಿಣ್ಣಗರ್ - ಶ್ರೀದಿವ್ಯಪುರೀ ವಿಷಯಕವಾದ, ಪತ್ತುಮ್-(ಈ) ದಶಕವನ್ನು, ವಲ್ಲಾರ್-ಬಲ್ಲವರು, ಕೋಣೈ ಇನ್ರಿ-ಸ್ವಲ್ಪವೂ ತೊಂದರೆ (ನ್ಯೂನತೆ) ಯಿಲ್ಲದೆ, ವಿಣ್ಣೋರ್‌ಕ್ಕು - ನಿತ್ಯಸೂರಿಗಳಿಗೆ, ಎನ್ರುಮ್-ಎಂದಿಗೂ, ಕುರವರ್‌ಕಳ್-ಗೌರವಾರ್ಹರಾಗಿ, ಆವರ್-ಆಗುವರು.

( ಸ-ಗಾ-ರ || )—

ಲೋಕಾಃ! ಪಶ್ಯತ ಚಾದ್ಭುತಂ ತು ತದಿದಂ ಪ್ರತ್ಯಕ್ಷಮೇವೇತಿ ಚ
ಶ್ರೀಶಂ ಸರ್ವಜಗೇಕ್ಷ್ರಮಾತ್ಮಚರಣಂ ಸ್ತೋತುಂ ಶಠಾರಿರ್ಮುನಿಃ |
ಸಾಹಸ್ರಂ ಕುರುಕಾಪುರಪ್ರಭುರಸಾವಾಹುಚ್ಛ್ರುತಾಜ್ಞಾತ್ಮಕಂ!
ಜ್ಞಾತ್ವಾ ದಿವ್ಯಪುರಂ ಪ್ರತೀಹ ದಶಕಂ ಸ್ಯುಸ್ಸೂರಿಸೇವ್ಯಾ ನರಾಃ ||

ತಾ|| ಲೋಕವಾಸಿಗಳೇ! ಇದನ್ನು ನೋಡಿರಿ—ಎಂದು ಎಲ್ಲರ ಕಣ್ಣಿದುರಿಗೂ ಬೆಳೆದ ಪಾದಗಳುಳ್ಳ (ತ್ರಿವಿಕ್ರಮನಂತೆ ಇರುವ) ಸರ್ವೇಶ್ವರನನ್ನು ಸ್ತುತಿಸಲು ಶ್ರೀಕುರುಕಾಪುರೀ ನಿರ್ವಾಹಕರಾದ ಶಠಾರಿಮುನಿವರ್ಯರು ರಚಿಸಿದ ಭಗವದಾಜ್ಞಾ ರೂಪವಾದ ಸಹಸ್ರಪದ್ಯಮಾಲೆಯೊಳು ಶ್ರೀದಿವ್ಯಪುರೀ ವಿಷಯಕವಾದ ಈ ದಶಕ ವನ್ನು ಬಲ್ಲವರು ನಿತ್ಯಸೂರಿಗಳಿಗೆ ಎಂದಿಗೂ ಸೇವ್ಯರಾಗುವರು.

( ದ್ರು-ಉ-ಸಂ || )—

ಕೋಪಂ ಮಮ ಪ್ರಣಯಜಂ ಪ್ರಶಮಯ್ಯ ಕೃಷ್ಣಃ
ಸ್ವಾಧೀನತಾಮತನುತೇತಿ ಸವಿಸ್ಮಯಸ್ಸಃ |
ಸ್ವೀಯಾಂ ವಿರುದ್ಧಜಗದಾಕೃತಿತಾಂ ಚ ತೇನ
ಸನ್ದರ್ಶಿತಾಮನುಬಭೂವ ಮುನಿಸ್ತ್ವತೀಯೇ ||

(ದ್ರು-ಉ-ಶಾ-ರ || )—

ಸಮ್ಪದ್ದಾರಿದ್ರ್ಯಭಾವಾದಸುಖಸುಖಕೃತೇಃ ಪತ್ತನಗ್ರಾಮಭಾವಾತ್ |
ಪುಣ್ಯಾಪುಣ್ಯಾದಿಭಾವಾತ್ಕಪಟಋಜುತಯಾ ಸರ್ವಲೋಕಾದಿಭಾವಾತ್ |
ದಿವ್ಯಾದಿವ್ಯಾಙ್ಗವತ್ತ್ವಾತ್ಸುರದಿತಿಜಗಣಸ್ನಿಗ್ಧಶತ್ರುತ್ವಕೀರ್ತ್ಯಾ
ಛಾಯಾಚ್ಛಾಯಾದಿಭಾವಾದಘಟಿತಘಟನಂ ಪ್ರಾಹ ಕೃಷ್ಣಂ ಶಠಾರಿಃ ||

(ಈ ತೃತೀಯ ದಶಕದ ಸಾರಾಂಶ) —

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾರೂಪದಿಂದ ಈಶ್ವರ ನೊಡನೆ ಪ್ರಣಯಕಲಹವಂಮಾಡಲು ಅವನು ತನ್ನನ್ನು ಸ್ವೀಕರಿಸಿದ ಪ್ರಕಾರ ವನ್ನೂ, ಅವನ ಪರಸ್ಪರವಿರುದ್ಧ ಧರ್ಮಗಳಿಂದ ಸಕಲಜಗದ್ವ್ಯಾಪ್ತಿಯನ್ನೂ ವರ್ಣಿಸಿ, ಅವನು ತಿರುವಿಣ್ಣಗರ್ ಎಂಬ ಶ್ರೀದಿವ್ಯಪುರಿಯಲ್ಲಿ ನಿತ್ಯವಾಸಮಾಡು ತ್ತಿದಾನೆಂದು ಅವನನ್ನೇ ಭಜಿಸಿ ಕೃತಾರ್ಥರಾಗಿ, ಈ ದಶಕವನ್ನು ಪಠಿಸುವವ ರೆಲ್ಲರೂ ದಿವ್ಯಸೂರಿಗಳಿಗೂ ಸೇವ್ಯರಾಗುವರೆಂದು ನಿಗಮನವಮಾಡಿರುತ್ತಾರೆ.

---

ಶ್ರೀಃ

# ಷಷ್ಠ ಶತಕದಲ್ಲಿ—ಚತುರ್ಥ ದಶಕ.

(ಕುರವೈಯಾಯ್‍ಚ್ಚಿಯರೋಡು—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀ ಕೃಷ್ಣನ ರಾಸಕ್ರೀಡಾದಿ ವೈಭವವನ್ನು ವರ್ಣಿಸುತ್ತಾರೆ)

---

(೧) ಕುರವೈಯಾಯ್‍ಚ್ಚಿಯರೋಡು ಕೋತ್ತದುಮ್
ಕುನ್ಱಮೊನ್ಱೇನ್ದಿಯದುಮ್,
ಉರವುನೀರ್ ಪೊಯ್‍ಕೈ ನಾಗಮ್
ಕಾಯ್ನ್ದದುಮುಳ್ಳಿಡ ಮಱ್ಱುಮ್‍ಪಲ,
ಅರವಿಲ್‍ಪಳ್ಳಿ ಪ್ಪಿರಾನ್‍ತನ್ ಮಾಯವಿನೈಕಳೈಯೇ
ಯಲಱ್ಱಿ,
ಇರವು ನನ್‍ಪಕಲುಮ್ ತವಿರ್‍ಕಿಲಮೆನ್ನ ಕುಱ್ಱಮೆನಕ್ಕೇ.

ಪ್ರ॥ ಆಯ್‍ಚ್ಚಿಯರೋಡು- ಗೋಪಿಗಳೊಡನೆ, ಕುರವೈ- ರಾಸಕ್ರೀಡೆಯಲ್ಲಿ, ಕೋತ್ತದುಮ್- ತನ್ನನ್ನು (ಗೋಪಿಗಳ ಮಧ್ಯೇ ಮಧ್ಯೇ) ಸೇರಿಸಿ ಕೈ ಪೋಣಿಸಿದುದೂ, ಒನ್ಱು- ಒಂದು, ಕುನ್ಱಮ್- ಪರ್ವತವನ್ನು, ಏನ್ದಿಯದುಮ್- (ಮಳೆಯನ್ನು ತಡೆಯುವುದಕ್ಕೆ ೭ ದಿನಗಳವರೆಗೆ) ಎತ್ತಿ ನಿಂತಿದ್ದುದೂ, ಉರವು- ಉಕ್ಕಿ ಬರುವ, ನೀರ್—ಜಲವುಳ್ಳ, ಪೊಯ್‍ಕೈ - ಮಡುವಿನಲ್ಲಿ, ನಾಗಮ್—ಕಾಳಿಯನೆಂಬ ಸರ್ಪವನ್ನು, ಕಾಯ್‍ನ್ದದುಮ್—ನಿಗ್ರಹಿಸಿ ಮರ್ದನಮಾಡಿದ ಪ್ರಕಾರವೂ, ಉಳ್ಳಿಡ—ಮೊದಲಾದ, ಮಱ್ಱುಮ್‍ಪಲ – ಇನ್ನೂ ಅನೇಕ ವಿಧವಾದ, ಅರವಿಲ್‍ಪಳ್ಳಿ—ಶೇಷಶಯನವನ್ನು ಬಿಟ್ಟುಬಂದ, ಪಿರಾನ್‍ತನ್ – ಉಪಕಾರಕನಾದ ಕೃಷ್ಣನ, ಮಾಯವಿನೈಕಳೈಯೇ – ಆಶ್ಚರ್ಯಚೇಷ್ಟಿತಗಳನ್ನೇ, ಅಲಱ್ಱಿ—ಬಾಯಿಂದ ಹೇಳಿ ಹೇಳಿ, ನನ್—ಅನುಕೂಲವಾದ, ಇರವುನ್‍ಪಕಲುಮ್ – ರಾತ್ರಿಯೂ ಹಗಲೂ, ತವಿರ್‍ಕಿಲಮ್ – ಬಿಡದೆ ಅನುಸನ್ಧಾನಮಾಡುತ್ತಿದೇವೆ. ಎನಕ್ಕು – ನನಗೆ, ಎನ್ನಕುಱ್ಱಮ್—ಯಾವ ಕೊರತೆಯುಂಟು ?

( ಸ–ಗಾ–ರ ॥ )—

ಗೋಪೀಭಿಃ ಕಿಲ ರಾಸಗೋಷ್ಠ್ಯಭಿರತಿರ್ಗೋವರ್ಧನೋದ್ಧಾರಣಂ
ಪೂರ್ಣಾರ್ಮ್ಭಸ್ಯಪಿ ಕಾಳಿಯಸ್ಯ ಸರಸಿ ಸ್ವಾಂಘ್ರಿದ್ವಯಾಸ್ಮರ್ದನಮ್ ।
ಏವಂ ಸರ್ವವಿಧಂ ಚ ನಾಗಶಯನಸ್ಯಾತ್ಯದ್ಭುತಂ ಚೇಷ್ಟಿತಂ
ಸಂಚಿನ್ತ್ಯೈವ ದಿವಾನಿಶಂ ಪ್ರಮುದಿತೋಽಸ್ಮ್ಯದ್ಯಾನವಾಪ್ತಂ ನ ಮೇ ॥

ತಾ॥ ಗೋಪಿಗಳೊಡನೆ ಮಧ್ಯೇ ಮಧ್ಯೇ ತನ್ನನ್ನು ರಾಸಕ್ರೀಡೆಯಲ್ಲಿ ಸೇರಿಸಿ ಕೈಪೋಣಿಸಿದುದೂ, ಪರ್ವತವನ್ನು ಎತ್ತಿ ಹಿಡಿದುಕೊಂಡಿದ್ದುದೂ, ಮಡುವಿನಲ್ಲಿದ್ದ (ಕಾಳಿಯ) ಸರ್ಪವನ್ನು ಮರ್ದನಮಾಡಿದುದೂ— ಮೊದಲಾದ ಅನೇಕವಿಧವಾದ ಶೇಷಶಯನನ ಮಾಯಾಚೇಷ್ಟಿತಗಳನ್ನು ಹೇಳಿ ಹೇಳಿ ರಾತ್ರಿಯೂ ಹಗಲೂ ಬಿಡದೆ ಅನುಸನ್ಧಾನಮಾಡುತ್ತಿರುವ ನಮಗೆ ಯಾವ ಕೊರತೆಯೂ ಇಲ್ಲವೆಂದು ಭಾವವು.

(೨) ಗೇಯತ್ತೀಙ್ಕುೞಲೂದಿಱ್ಱುಮ್
ನಿರೈಮೇಯ್ತ್ತದುಮ್, ಕೆಣ್ಡೈಯೊಣ್ಕಣ್
ವಾಶಪ್ಪೂಙ್ಕುೞಲ್ ಪಿನ್ನೈತೋಳ್ಕಳ್
ಮಣನ್ದದುಮ್ ಮಱ್ಱುಮ್ಪಲ,
ಮಾಯಕ್ಕೋಲಪ್ಪಿರಾನ್‌ತನ್ ಶೆಯ್ಕೈ ನಿನೈನ್ದು
ಮನಮ್ ಕುೞೈನ್ದು,
ನೇಯತ್ತೋಡು ಕೞಿನ್ದಪೋದೆನಕ್ಕೆವ್ವುಲಕಮ್ ನಿಕರೇ.

ಪ್ರ॥ ಗೇಯ–ಗಾನಸ್ವರಗಳನ್ನು ಏರ್ಪಡಿಸಿಕೊಂಡು, ತೀಙ್ಕುೞಲ್–ಮಧುರವಾದ ಕೊಳಲನ್ನು, ಊದಿಱ್ಱುಮ್ – ಊದಿದುದೂ, ನಿರೈ – ಪಶುಗಳನ್ನು, ಮೇಯ್ತ್ತದುಮ್–ಮೇಯಿಸಿದ ಪ್ರಕಾರವೂ, ಕೆಣ್ಡೈ – ಮೀನಿನಂತೆ, ಒಣ್–ರಮಣೀಯವಾದ, ಕಣ್–ನೇತ್ರಗಳುಳ್ಳ, ವಾಶಪ್ಪೂಮ್ – ಪರಿಮಳಭರಿತವಾದ ಪುಷ್ಪಗಳುಳ್ಳ, ಕುೞಲ್–ಕೇಶಪಾಶವುಳ್ಳ, ಪಿನ್ನೈತೋಳ್ಕಳ್ – ನೀಳೆಯೆಂಬ (ನಪ್ಪಿನ್ನೈ–) ಗೋಪೀಮಣಿಯ ತೋಳುಗಳೊಡನೆ, ಮಣನ್ದದುಮ್–ಸಂಶ್ಲೇಷಿಸಿದ ಪ್ರಕಾರವೂ, ಮಱ್ಱುಮ್–ಮತ್ತೂ, ಪಲ– ಅನೇಕ, ಮಾಯಕ್ಕೋಲ – ಆಶ್ಚರ್ಯಕರವಾದ ರೂಪವುಳ್ಳ, ಪಿರಾನ್‌ತನ್–ಸ್ವಾಮಿಯಾದ ಕೃಷ್ಣನ, ಶೆಯ್ಕೈ–ಚೇಷ್ಟೆಗಳನ್ನು, ನಿನೈನ್ದು–ಸ್ಮರಿಸಿ, ಮನಮ್–ಮನಸ್ಸು, ಕುೞೈನ್ದು–ಶಿಥಿಲವಾಗಿ,

ನೇಯತ್ತೋಡು -- ಸ್ನೇಹದೊಡನೆ, ಪೋದುಕ್ಕಿನ್ದ – ಕಾಲವು ಕಳೆಯುತ್ತಿದೆ. ಎನಕ್ಕು–ನನಗೆ, ಎವ್ವುಲಕಮ್ – ಯಾವ ಲೋಕವು ತಾನೆ, ನಿಕರ್–ಸಮಾನ ವಾಗುವುದು ? (ಪರಮಪದದಲ್ಲೂ ಕೂಡ ನನಗೆ ಸಮಾನರಿಲ್ಲವೆಂದು ಭಾವವು.)

( ಸ–ಗಾ-ರ || )—

**ಗೀತಂ ಹೃದ್ಯತಮನ್ತು ವೇಣುಮುಖತೋ ಗಾಯನ್ ಪಶೂನ್ ಚಾಸಯನ್**
**ಮುಗ್ಧಾಕ್ಷೀಂ ಕುಸುಮಸ್ರಗಂಚಿತತನುಂ ನೀಳಾಂ ಸಮಾಶ್ಲಿಷ್ಯ ಯಃ ।**
**ಮಾಯಾಚೇಷ್ಟಿತಮದ್ಭುತಂ ವ್ಯರಚಯತ್ತಸ್ಯಾದ್ಯ ವೃತ್ತಂ ಸ್ಮರನ್**
**ಮೋದೇಽಹಂ ದ್ರುತಚಿತ್ತ ಏವ ಸತತಂ ! ಲೋಕಸ್ಸಮಃ ಕೋ ಮಮ ? ||**

ತಾ|| ಗಾನಸ್ವರಗಳನ್ನು ಏರ್ಪಡಿಸಿಕೊಂಡು ಮಧುರವಾಗಿ ಕೊಳಲೂದಿದುದೂ, ಪಶುಗಳನ್ನು ಮೇಯಿಸಿದುದೂ, ಮೀನಲೋಚನೆಯಾದ ಸುಗನ್ಧಿಪುಷ್ಪಾಲಂಕೃತ ಕೇಶವುಳ್ಳ ನೀಳಾ (ನಪ್ಪಿನ್ನೈ) ದೇವಿಯ ತೋಳುಗಳೊಡನೆ ಸಂಶ್ಲೇಷವಂ ಮಾಡಿದುದೂ ಮತ್ತೂ ಅನೇಕವಿಧವಾದ ಮಾಯಾರೂಪಿಯಾದ ಶ್ರೀಕೃಷ್ಣನ ಚೇಷ್ಟಿತಗಳನ್ನು ಸ್ಮರಿಸಿ ಮನಸ್ಸು ಶಿಥಿಲವಾಗಿ ನನ್ನ ಕಾಲವು (ಅವನಲ್ಲಿ) ಸ್ನೇಹದಿಂದ ಕಳೆಯುತ್ತಿದೆ. ನನಗೆ ಯಾವಲೋಕವು ತಾನೆ ಸಮಾನವಾಗಿರುವುದು ? (ಯಾವಲೋಕದಲ್ಲೂ ನನಗೆ ಸಮಾನರಿಲ್ಲವೆಂದು ಭಾವವು.)

(೩) ನಿಕರಿಲ್‌ಮಲ್ಲರೈ ಚ್ಚೆಱ್ಱದುಮ್
ನಿರೈಮೇಯ್‌ತ್ತದುಮ್ ನೀಳ್‌ನೆಡುಙ್ಕೈ-
ಚ್ಚಿಕರವಾಕಳಿಱಟ್ಟದುಮಿವೈಪೋಲ್ವನವುಮ್ ಪಿಱವುಮ್,
ಪುಕರ್‌ಕೊಳ್‌ಶೋದಿ ಪ್ಪಿರಾನ್‌ತನ್ ಶೆಯ್‌ಕೈ ನಿನೈನ್ದು
ಪುಲಮ್ಬಿಯೆನ್ಱುಮ್,
ನುಕರವೈಕಲ್‌ವೈಕ ಪ್ಪೆಱ್ಱೇನೆನಕ್ಕಿನ್ನಿನಿ ನೋವದುವೇ

ಪ್ರ|| ನಿಕರಿಲ್– (ತಮಗೆ) ಸಮಾನರಿಲ್ಲದ, ಮಲ್ಲರೈ – ಮಲ್ಲರನ್ನು (ಜಟ್ಟಿಗಳನ್ನು), ಶೆಱ್ಱದುಮ್–ಕೊಂದುದೂ, ನಿರೈ–ಪಶುಗಳನ್ನು, ಮೇಯ್‌ತ್ತದುಮ್–ಮೇಯಿಸಿದುದೂ, ನೀಳ್ – ಉನ್ನತವಾಗಿ, ನೆಡುಮ್ – ಉದ್ದವಾಗಿರುವ, ಕೈ–ಸೊಂಡಿಲನ್ನು ಉಳ್ಳ, ಶಿಕರಮ್–ಪರ್ವತಶಿಖರದಂತೆ, ಮಾ–ಶ್ಲಾಘ್ಯವಾದ, ಕಳಿಱು–ಆನೆಯನ್ನು, ಅಟ್ಟದುಮ್–ನಾಶಪಡಿಸಿದುದೂ, ಇವೈಪೋಲ್ವನವುಮ್–ಇದರಂತೆ ಇನ್ನೂ ಕೆಲವು ಅಂಶಗಳೂ, ಪಿಱವುಮ್–ಮತ್ತೂ ಅನೇಕ ವಿಷಯಗಳೂ ಆದ,

ಪುಕರ್‌ಕೊಳ್‌ಶೋದಿ-ಅತ್ಯುಜ್ಜ್ವಲತೇಜೋರೂಪನಾದ, ಪಿರಾರ್ತ-ಸ್ವಾಮಿಯಾದ ಕೃಷ್ಣನ, ಶೆಯ್‌ಕೈ-ಕೃತ್ಯಗಳನ್ನು, ನಿನೈನ್ದು-ಸ್ಮರಿಸಿ, ಪುಲಮ್ಬಿ-ಸ್ತೋತ್ರಮಾಡಿ, ಎಣುಮ್-ಪ್ರತಿದಿನವೂ, ನುಕರ-ಭುಜಿಸುವಂತೆ (ಅನುಭವಿಸುವಂತೆ), ವೈಕಲ್ ವೈಕ-ದೀರ್ಘಕಾಲದಲ್ಲೆಲ್ಲಾ, ಪೆಱ್ಱೇ - (ಭಾಗ್ಯವನ್ನು) ಹೊಂದಿದೆನು. ಇನಿ-ಇನ್ನುಮೇಲೆ, ಎನಕ್ಕು-ನನಗೆ, ಏ-ಏತಕ್ಕೆ, ನೋವದು-ನೋಯುವುದು (ವ್ಯಥೆಯುಂಟಾಗುವುದು ?)—(ಯಾವ ವ್ಯಥೆಯೂ ಇಲ್ಲವೆಂದು ಭಾವವು.)

( ಸ-ಗಾ-ರ || )—

ಮಲ್ಲಾನಾಮಪಿ ಮರ್ದನಂ ಪಶುಗಣೈರ್ಗತ್ವಾ ಚ ತದ್ಧಾಸನಂ
ದೀರ್ಘೋತ್ತುಂಗಕರಸ್ಯ ಚಾಪಿ ಕರಿಣಸ್ಸಮ್ಮರ್ದನಂ ವೈರಿಣಃ |
ಏವಂ ಚೇಷ್ಟಿತಸನ್ತತಿಂ ಚ ವಿವಿಧಾಂ ಸ್ಮೃತ್ವಾ ಪರಜ್ಯೋತಿಷಃ
ಸಜ್ಯೋತ್ಯಾಪಿ ಚ ನಿತ್ಯಮಸ್ಮಿ ಸುಚಿರಂ ತುಷ್ಟೋ ನ ಮೇ ಸ್ಯಾದ್ವ್ಯಥಾ||

ತಾ|| ಅಸದೃಶರಾದ ಮಲ್ಲರನ್ನು ಕೊಂದುದೂ, ಪಶುಗಳನ್ನು ಮೇಯಿಸಿದುದೂ, (ಕುವಲಯಾಪೀಡವೆಂಬ) ಮಹಾಗಜವನ್ನು ನಾಶಪಡಿಸಿದುದೂ, ಇವೇ ಮೊದಲಾದ ಅನೇಕವಿಧವಾದ (ದಿವ್ಯತೇಜೋನಿಧಿಯಾದ) ಶ್ರೀಕೃಷ್ಣನ ಕೃತ್ಯಗಳನ್ನು ಸ್ಮರಿಸಿ ಸ್ತುತಿಸಿ ಪ್ರತಿದಿನವೂ ಅನುಭವಿಸುವಂತೆ ದೀರ್ಘವಾದ ಕಾಲದಲ್ಲೆಲ್ಲಾ ಭಾಗ್ಯವನ್ನು ಪಡೆದೆನು. ಹೀಗಿರುವಲ್ಲಿ ನನಗೆ ಯಾವ ವ್ಯಥೆಯುಂಟು ? (ಯಾವ ಮನೋವ್ಯಥೆಯೂ ಇಲ್ಲವೆಂದು ಭಾವವು.)

(೪) ನೋವವಾಯ್‌ಚ್ಚಿ ಯುರಲೋಡಾರ್‌ಕ್ಕ ವಿರಙ್ಗಿತ್ತುಮ್
ವಞ್ಜಪ್ಪೆಣ್ಣೈಶ್
ಚಾವ ಪ್ಪಾಲುಣ್ಡುದುಮೂರ್‌ಶಕಟವಿಱ ಚ್ಚಾಡಿಯುದುಮ್
ತೇವಕ್ಕೋಲ ಪ್ಪಿರಾಱ್ತನ್ ಶೆಯ್‌ಕೈ ನಿನೈನ್ದು
ಮನಞ್ಙ್‌ಕುಳೈನ್ದು,
ಮೇವ ಕ್ಕಾಲಙ್ಗಳ್‌ಕೂಡಿನೇನೆನಕ್ಕಿನ್ನಿನಿ ವೇಣ್ಡುವದೇ.

ಪ್ರ|| ನೋವ-ನೋಯುವಂತೆ, ಆಯ್‌ಚ್ಚಿ-ಗೋಪಿಯಾದ ಯಶೋದೆಯು, ಉರಲೋಡು - ಒರಳಿನೊಡನೆ, ಆರ್‌ಕ್ಕ-ಬಿಗಿಯಾಗಿ ಕಟ್ಟಿಹಾಕಲು, ಇರಙ್ಗಿತ್ತುಮ್-ಅದಕ್ಕೆ ವಶ್ಯವಾದುದೂ, ವಞ್ಜಪ್ಪೆಣ್ಣೈ-ಮಾಯಾಸ್ತ್ರೀಯಾದ ಪೂತನೆಯನ್ನು, ಶಾವ-ಸಾಯಿಸುವಂತೆ, ಪಾಲುಣ್ಡುದುಮ್ - ಹಾಲನ್ನು (ಸ್ತನ್ಯವನ್ನು)

ಹೀರಿದುದೂ, ಊರ್–(ಅಸುರಾವೇಶದಿಂದ) ಓಡಿಬರುವ, ಶಕಟಮ್- ಬಂಡಿಯು, ಇಱ–ಮುರಿದುಹೋಗುವಂತೆ, ಶಾಡಿಯದುಮ್–ಕಾಲಿಂದ ಒದ್ದು ಚೂರ್ಣಮಾಡಿದುದೂ (ಮುಂತಾದ), ತೇವಕ್ಕೋಲ–ಅಪ್ರಾಕೃತ ದಿವ್ಯವಿಗ್ರಹವುಳ್ಳ, ಪಿರಾತ–ಸ್ವಾಮಿಯಾದ ಕೃಷ್ಣನ, ಶೆಯ್‍ಕೈ–ಕೃತ್ಯಗಳನ್ನು, ನಿನೈನ್ದು–ಸ್ಮರಿಸಿ, ಮನಮ್–ಮನಸ್ಸು, ಕುೞೈನ್ದು – ಶಿಥಿಲವಾಗಿ, ಮೇವ – ಹೊಂದಿ ಅನುಭವಿಸುವಂತೆ, ಕಾಲಙ್ಗಳ್‍ಕೂಡಿನೇ–ಅನುಕೂಲ ಕಾಲಗಳನ್ನು ಪಡೆದೆನು. ಇನಿ–ಇನ್ನುಮೇಲೆ, ಎನಕ್ಕು ನನಗೆ, ಎ‌ನ್ ವೇಣ್ಡುವದು – ಏನು ಬೇಕಾಗಿರುವುದು (ಬೇರೆ ಯಾವ ಅಪೇಕ್ಷೆ ಇರುವುದು) ?

( ಸ–ಗಾ–ರ ॥ )—

ಬನ್ಧಪ್ರಾಪ್ತಿಮುಲೂಖಲೇಽಸ್ಯ ತು ಹರೇರ್ಭವ್ಯತ್ವಮಸ್ಯಾಸ್ಯ ತಾಂ
ಹನ್ತುಂ ಸ್ತನ್ಯವಿಷಸ್ಯ ಪಾನಮಪಿ ತನ್ಮಾಯಾತ್ಮಿಕಾಂ ಪೂತನಾಮ್ ।
ಮಾಯಾಭೃಚ್ಛಕಟಸ್ಯ ಭಞ್ಜನಮಪಿ ಶ್ರೀಕೃಷ್ಣಚೇಷ್ಟಾವಳಿಂ
ಸ್ಮೃತ್ವಾ ಮೇ ಮನ ಏವಮೇವ ಸತತಂ ತುಷ್ಟಂ! ಕಿಮಿಹಾಽಪರಮ್?॥

ತಾ॥ ಗೋಪಿಯಾದ ಯಶೋದೆಯು ನೋಯುವಂತೆ ಒರಳಿಗೆ ಬಿಗಿಯಾಗಿ ಕಟ್ಟಿಹಾಕಲು ಅದಕ್ಕೆ ವಶ್ಯವಾಗಿದ್ದುದೂ, ಮಾಯಾಪೂತನೆಯನ್ನು ಸಾಯಿಸುವಂತೆ ಸ್ತನ್ಯಪಾನಮಾಡಿದುದೂ, ಅಸುರಾವೇಶದಿಂದ ಓಡಿಬರುವ ಶಕಟವನ್ನು ಕಾಲಿನಿಂದ ಒದ್ದು ಮುರಿದುಹಾಕಿದುದೂ—ಇವೇ ಮುಂತಾದ (ದಿವ್ಯವಿಗ್ರಹವುಳ್ಳ) ಶ್ರೀಕೃಷ್ಣನ ಕೃತ್ಯಗಳನ್ನು ಸ್ಮರಿಸಿ ಅನುಭವಿಸುತ್ತ ನನ್ನ ಮನಸ್ಸು ಶಿಥಿಲವಾಗಿ ನನ್ನ ಕಾಲವೆಲ್ಲಾ ಅತ್ಯನ್ತ ಅನುಕೂಲವಾಗಿ ಕಳೆಯುತ್ತಿದೆ. ನನಗೆ ಇನ್ನು ಏನುಬೇಕಾಗಿರುವುದು ?

(೨೧) ವೇಣ್ಡಿತ್ತೇವರಿರಕ್ಕ ವನ್ದುಪಿಱನ್ದದುವುಮ್
ವೀಱಿಲ್ಶಿರುಳ್'ವಾಯ್,
ಪೂಣ್ಡಾತನ್ನೈತ್ತುಪ್ಪುಲಮ್ಬ ಪೋಯ್‍ಉಬ್ಸೋರಾಯ್ ಕ್ಕುಲಮ್
ಪುಕ್ಕದುವುಮ್,
ಕಾಣ್ಡಲಿನ್ಱಿ ವಳರ್‍ನ್ದು ಕಞ್ಜನೈತ್ತುಞ್ಜವಞ್ಜಮ್‍ಶೆಯ್ದದುಮ್,
ಈಣ್ಡು ನಾನಲಱ್ಱಪ್ಪೈಱ್ಱೆನೆನಕ್ಕಿನ್ನು ಇಕಲುಳದೇ.

ಪ್ರ॥ ತೇವರ್–ದೇವತೆಗಳು, ಇರಕ್ಕ–ಪ್ರಾರ್ಥಿಸಲು, ವೇಣ್ಡಿ–ತನ್ನ ಇಚ್ಛೆಯಿಂದ, ವನ್ದು–(ಕ್ಷೀರಸಮುದ್ರದಿಂದ) ಬಂದು, ಪಿಱನ್ದದುಮ್–ಅವತರಿಸಿದುದೂ,

ಅನ್ನು—ಆಗಲೇ, ಅನ್ನೈ—ಹೆತ್ತತಾಯಿಯಾದ ದೇವಕಿಯು, ಪೊಣ್ಣು-(ಕಂಸಭಯ ದಿಂದ) ಎತ್ತಿಕೊಂಡು, ಪುಲಮ್ಬ—ಮೊರೆಯಿಡಲು, ವೀಙ್ಗು—ನಿಬಿಡವಾದ, ಇರುಳ್ ವಾಯ್—ರಾತ್ರಿಯಲ್ಲಿ (ಕತ್ತಲೆಯಲ್ಲಿ), ಪೋಯ್-ಹೋಗಿ, ಅಙ್ಗು—ಅಲ್ಲಿ, ಓರ್ ಆಯ್‌ಕ್ಕುಲಮ್ - ಅದ್ವಿತೀಯವಾದ ಗೋಕುಲುವೆಂಬ ಸ್ಥಲದಲ್ಲಿ, ಪುಕ್ಕದುಮ್— ಪ್ರವೇಶಿಸಿದುದೂ, ಕಾಣ್ಣಾಲ್ - (ಆ ಕಂಸನ) ದೃಷ್ಟಿಯು, ಇನ್ರಿ— ಇಲ್ಲದಂತೆ, ವಳರ್‌ನ್ದು—ಬೆಳೆದು, ಕಞ್ಜನ್—ಕಂಸನು, ತುಞ್ಜ—ನಾಶಹೊಂದುವಂತೆ, ವಞ್ಜಮ್ ಶೆಯ್ದದುಮ್- ವಂಚನೆಮಾಡಿದುದೂ, (ಇವುಗಳನ್ನೆಲ್ಲಾ) ಈಣ್ಣು—ಇಲ್ಲಿ ಇದ್ದು ಕೊಂಡು, ನಾನ್—ನಾನು, ಅಲಱ್ಱ- ಬಾಯಿಬಿಟ್ಟು ಹೇಳಲು, ಪೆಱ್ಱೇನ್—ಭಾಗ್ಯಶಾಲಿ ಯಾದೆನು, ಎನಕ್ಕು-ನನಗೆ, ಎನ್ನ ಇಕಲ್—ಯಾವ ವಿರೋಧವು, ಉಳದು— ಉಂಟಾಗಿದೆ ? (ಯಾವುದಾದರೂ ಇದ್ದರೆ ಕಂಸನಂತೆ ನಷ್ಟವಾಗಿ ಹೋಗುವುದು.)

( ಸ—ಗಾ—ರ ‖ )—

**ದೇವೈರರ್ಥಿತ ಏವ ಜನ್ಮಭೃದಿಹ ಕ್ಷೀರಾರ್ಣವಾದರ್ಥಿತೋ**
**ಮಾತ್ರಾ ಯಸ್ತ್ವಮಸಿ ಸ್ವಯಂ ಯದವಿಶದ್ಗೋಪಾಙ್ಗಣಂ ಶ್ರೀಹರಿಃ |**
**ಪುಷ್ಟಸ್ತತ್ರ ಹಿ ಗುಪ್ತ ಏವ ಚ ರಿಪುಂ ಕಂಸಂ ಯಥಾ ಚಾವಧೀತ್**
**ಸರ್ವಂ ಕೃತ್ರಿಮಚೇಷ್ಟಿತಂ ತು ತದಿದಂ ವಚ್ಮೀಹ! ಕಿಂ ಮೇ ಭಯಮ್?‖**

ತಾ॥ ದೇವತೆಗಳು ಪ್ರಾರ್ಥಿಸಲು ತನ್ನ ಇಚ್ಛೆಯಿಂದ ಬಂದು ಅವತರಿಸಿ ದುದೂ, ಆಗಲೇ ದೇವಕಿಯು ಎತ್ತಿಕೊಂಡು ಮೊರೆಯಿಡಲು ಆ ರಾತ್ರಿಯಲ್ಲೇ ಗೋಕುಲದೊಳು ಪ್ರವೇಶಿಸಿದುದೂ, ಅಲ್ಲಿ ಕಂಸನ ದೃಷ್ಟಿಯಿಲ್ಲದಂತೆ ಬೆಳೆದು, ಕಂಸನು ನಾಶಹೊಂದುವಂತೆ ವಂಚನೆಮಾಡಿದುದೂ—ಇವುಗಳನ್ನೆಲ್ಲಾ ನಾನು ಬಾಯಿಂದ ಹೇಳುವಷ್ಟು ಭಾಗ್ಯಶಾಲಿಯಾದೆನು. ನನಗೆ ಯಾವುದು ವಿರೋಧಿ ಯಾಗಿರುವುದು ? (ಯಾವುದೂ ಇಲ್ಲವಷ್ಟೆ !)

(೭) ಇಕಲ್‌ಕೊಳ್ ಪುಳ್ಳೈಪ್ಪಿಳನ್ದುಮಿಮಿಲೇಱುಕಳ್
ಶೆಱ್ಱದುಮ್,
ಉಯಿರ್‌ಕೊಳ್ ಶೋಲೈಕ್ಕುರುನ್ದೊಶಿತ್ತದುಮುಳ್‌ಪಡ
ಮಱ್ಱುಮ್‌ಪಲ,
ಅಕಲ್‌ಕೊಳ್ ವೈಯಮಳನ್ದ ಮಾಯನೆನ್ನಪ್ಪನ್ ತನ್
ಮಾಯಙ್ಗಳೇ,
ಪಕಲಿರಾಪ್ಪರವ ಪ್ಪೆಱ್ಱೇನೆನಕ್ಕೆನ್ನ ಮನಪ್ಪರಿಪ್ಪೇ

ಪ್ರ॥ ಇಕಲ್-ಯುದ್ಧದಲ್ಲಿ, ಕೊಳ್-ಸಿದ್ಧವಾಗಿ ಬಂದ, ಪುಳ್ಳೈ-ಪಕ್ಷಿಯಾದ ಬಕಾಸುರನನ್ನು, ಪಿಳನ್ದದುಮ್-(ಬಾಯಿ) ಸೀಳಿದುದೂ, ಇಮಿಲ್-(ಬಲಸೂಚಕವಾದ) ಹಿರಳುಗಳುಳ್ಳ, ಏಱುಕಳ್-ಎತ್ತುಗಳನ್ನು, ಶೆಗುತ್ತದುವುಮ್-ಕೊಂದುದೂ, ಉಯರ್‌ಕೊಳ್-ಔನ್ನತ್ಯವುಳ್ಳ, ಶೋಲೈಕ್ಕರುನ್ದು-ವೃಕ್ಷಗಳನ್ನು, ಒಶಿತ್ತದುಮ್-ಮುರಿದುದೂ, ಉಳ್ಪಡ-ಇವುಗಳೇ ಮೊದಲಾದ, ಮಱ್ಱುಮ್‌ಪಲ-ಇನ್ನೂ ಅನೇಕ ಪ್ರಕಾರವಾದ, ಅಕಲ್‌ಕೊಳ್ - ವಿಸ್ತಾರವುಳ್ಳ, ವೈಯಮ್ - ಭೂಮಿಯನ್ನು, ಅಳನ್ದ-ಅಳೆದ (ಮಹಾಬಲಿಯ ಗರ್ವಭಂಗಮಾಡಿದ), ಮಾಯನ್-ಆಶ್ಚರ್ಯಚೇಷ್ಟಿತನಾದ, ಎನ್-ನನ್ನ, ಅಪ್ಪನ್‌ತನ್-ಸ್ವಾಮಿಯಾದ ಕೃಷ್ಣನ, ಮಾಯಙ್ಗಳ್-ಮಾಯೆಗಳನ್ನು, ಪಕಲ್ ಇರಾ - ಹಗಲೂ ರಾತ್ರಿಯೂ (ಅವಿಚ್ಛಿನ್ನವಾಗಿ), ಪರವ-ಸ್ತೋತ್ರಮಾಡಲು, ಪೆಱ್ಱೇನ್-ಭಾಗ್ಯವುಳ್ಳವನಾಗಿದೇನೆ. ಎನಕ್ಕು-ನನಗೆ, ಎನ್ನ-ಯಾವವಿಧವಾದ, ಮನಪ್ಪರಿಪ್ಪು-ಮನೋದುಃಖವಿರುವುದು ? (ಯಾವ ಚಿನ್ತೆಯೂ ಇಲ್ಲವೆಂದು ಭಾವವು )

( ಸ-ಗಾ-ರ ॥ )—

**ಯುದ್ಧೇ ತಸ್ಯ ಬಕಸ್ಯ ದಾರಣಮಪಿ ! ಖ್ಯಾತಂ ವೃಷಧ್ವಂಸನಂ !**
**ಚೋತ್ತುಂಗಾರ್ಜುನವೃಕ್ಷಯುಗ್ಮಮಥನಂ ತ್ರೈವಿಕ್ರಮಂ ಚೇಷ್ಟಿತಮ್ |**
**ಏವಂ ಕೃಷ್ಣಮಚೇಷ್ಟಿತಾವಳಿಮಿಮಾಂ ನಾಥಸ್ಯ ಮೇ ಶ್ರೀಹರೇಃ**
**ಸ್ತೋತುಂ ಹನ್ತ! ದಿವಾನಿಶಂ ಕಿಲ ಕೃತೀ ಸೋಽಸ್ಮಿ! ನ ಚಿನ್ತಾಽಸ್ತಿ ಮೇ॥**

ತಾ॥ ಯುದ್ಧಸನ್ನದ್ಧನಾಗಿ ಬಂದ ಬಕಪಕ್ಷಿಯನ್ನು ಸೀಳಿದುದೂ, ಸಪ್ತವೃಷಭಗಳನ್ನು ಕೊಂದುದೂ, ಯಮಳಾರ್ಜುನವೃಕ್ಷಗಳನ್ನು ನಿರ್ಮೂಲಮಾಡಿದುದೂ— ಇವುಗಳೇ ಮೊದಲಾದ ಅನೇಕ ಕಾರ್ಯಗಳು ತ್ರಿವಿಕ್ರಮಾವತಾರವಂಮಾಡಿ ವಿಶಾಲವಾದ ಭೂಮಿಯನ್ನು ಅಳೆದ ಮಾಯಾಚೇಷ್ಟಿತನಾದ ನನ್ನ ಸ್ವಾಮಿಯ ಕೃತ್ಯಗಳು. ಇವುಗಳನ್ನು ಹಗಲೂ ರಾತ್ರಿಯೂ ಸ್ತೋತ್ರಮಾಡುವಷ್ಟು ಭಾಗ್ಯಶಾಲಿಯಾಗಿದೇನೆ; ನನಗೆ ಯಾವ ಮನಃಕ್ಲೇಶವಿರುವುದು ? (ಯಾವ ಚಿನ್ತೆಯೂ ಇಲ್ಲ )

(೭) ಮನಪ್ಪರಿಪ್ಪೋಡಳುಕ್ಕು ಮಾನಿಡಶಾದಿಯಿಲ್ ತಾನ್‌ಪಿಱನ್ದು,
ತನಕ್ಕು ವೇಣ್ಡುರುಕೊಣ್ಡು ತಾನ್ ತನಶೀಱ್ಱತ್ತಿನೈ
ಮುಡಿಕ್ಕುಮ್,
ಪುನತ್ತುೞಾಯ್‌ಮುಡಿ ಮಾಲೈಮಾರ್ವನೆನ್ನಪ್ಪನ್ ತನ್
ಮಾಯಙ್ಗಳೇ,
ನಿನೈಕ್ಕುಮ್ ನೆಞ್ಜುಡೈಯೇನೆನಕ್ಕಿನಿ ಯಾರ್ ನಿಕರ್
ನೀಣಿಲತ್ತೇ.

ಪ್ರ॥ ಮನಪ್ಪರಿಪ್ಪೋಡು-(ಪರದುಃಖ ದುಃಖಿತ್ವರೂಪವಾದ ದಯಾಗುಣದ) ಮನೋವ್ಯಥೆಯೊಡನೆ, ಅಲುಕ್ಕು-ಮಾಲಿನ್ಯದಿಂದ ಕೂಡಿದ, ಮಾನಿಡಶಾದಿಯಿಲ್-ಮನುಷ್ಯಜಾತಿಯಲ್ಲಿ, ತಾ೯-(ನಿತ್ಯನಿರ್ಮಲನಾದ-ಹೇಯಪ್ರತಿಭಟನಾದ) ತಾನು, ಪಿಱನ್ದು-(ಮನುಷ್ಯ ಸಜಾತೀಯನಾಗಿ) ಹುಟ್ಟಿದಾಗ್ಯೂ, ತನಕ್ಕುವೇಣ್ಡು-ತನ್ನ ಇಚ್ಛಾನುರೂಪವಾದ, ಉರು-ರೂಪಗಳನ್ನು, ಕೊಣ್ಡು-ಸ್ವೀಕರಿಸಿ, ತಾ೯-(ಆಶ್ರಿತ ವಾತ್ಸಲ್ಯವುಳ್ಳ) ತಾನು, ತನಶೀಱ್ರತ್ತಿನೈ-ತನ್ನ ಕೋಪವನ್ನು, ಮುಡಿಕ್ಕುಮ್-(ಶತ್ರುಧ್ವಂಸವನ್ನು ಮಾಡಿ) ತೀರಿಸುವವನಾಗಿ, ಪುನತ್ತುೞಾಯ್-ಭೋಗ್ಯವಾದ ತುಳಸೀಮಾಲೆಯುಳ್ಳ, ಮುಡಿ - ಕಿರೀಟವನ್ನು ಧರಿಸಿರುವ, ಮಾಲೈಮಾರ್ಪ೯-ಮಾಲೆಯೊಡನೆ ಕೂಡಿದ ವಕ್ಷಸ್ಸ್ಥಲವುಳ್ಳ, ಎ೯ ಅಪ್ಪ೯ತ೯ - ನನ್ನ ಸ್ವಾಮಿಯ, ಮಾಯಙ್ಗಳ್ - ಆಶ್ಚರ್ಯಚೇಷ್ಟಿತಗಳನ್ನು, ನಿನೈಕ್ಕುಮ್-ಸ್ಮರಿಸುವ, ನೆಞ್ಜು-ಮನಸ್ಸನ್ನು, ಉಡೈಯೇ೯-ಉಳ್ಳ, ಎನಕ್ಕು-ನನಗೆ, ಇನಿ-ಇನ್ನುಮೇಲೆ, ನೀಳ್ ನಿಲತ್ತೇ-ಈ ಮಹಾಪೃಥಿವಿಯಲ್ಲಿ, ನಿಕರ್-ಸಮಾನರು, ಯಾರ್-ಯಾರು ?

( ಸ-ಗಾ-ರ ॥ )—

**ಜಾತೋ ದುಃಖಯುತೇ ಚ ಮಾನುಷಕುಲೇ ನಾನಾತನೂರ್ಧಾರಯ೯**
**ಸ್ವೇಚ್ಛಾತಶ್ಚ ರಿಪೂ೯ ಪ್ರಹತ್ಯ ನಿತರಾಂ ಕೋಪಪ್ರಶಾನ್ತಿಂ ವಹ೯ |**
**ದಿವ್ಯಶ್ರೀತುಳಸೀಂ ಕಿರೀಟಕಲಿತಾಂ ಮಾಲಾಂ ಚ ಧತ್ತೇ ಹರಿ-**
**ರ್ವಕ್ಷಸ್ಯೇನಮಹಂ ಸ್ಮರಾಮಿ ಸತತಂ ! ಕಸ್ಸ್ಯಾತ್ಸಮೋ ಮೇ ಭುವಿ ?॥**

ತಾ॥ ಮನೋವ್ಯಥೆಯ ಮಾಲಿನ್ಯದೊಡನೆ ಕೂಡಿದ ಮಾನುಷಜಾತಿಯಲ್ಲಿ ತಾನು ಹುಟ್ಟಿದಾಗ್ಯೂ ತನ್ನ ಇಚ್ಛಾರೂಪಗಳನ್ನು ಸ್ವೀಕರಿಸಿ, ತನ್ನ ಕೋಪವನ್ನು ಶತ್ರುಧ್ವಂಸದಿಂದ ನಾಶಪಡಿಸುವ, ದಿವ್ಯ ತುಲಸೀಮಾಲಾಲಂಕೃತ ಕಿರೀಟಧಾರಿಯಾದ ಶ್ರೀವತ್ಸಲಾಂಛನನಾದ ನನ್ನ ಸ್ವಾಮಿಯ ಮಾಯೆಗಳನ್ನು ಸ್ಮರಿಸುವಂತಹ ಮನಸ್ಸುಳ್ಳ ನನಗೆ ಈ ಮಹಾಪೃಥಿವಿಯಲ್ಲಿ ಯಾರು ಸಮಾನರು ?

(೮) ನೀಣಿಲತ್ತೊಡು ವಾ೯ವಿಯಪ್ಪ ನಿತ್ತ್ಯಪೆರುಮ್
ಪೋರ್‌ಕಳ್‌ತೆಯ್ದು,
ವಾಣನಾಯಿರಮ್‌ತೋಳ್ ತುಣಿತ್ತದುಮುಳ್ಳಡ
ಮೊಱ್ಱುಮ್‌ಪಲ,
ಮಾಣಿಯಾಯ್ ನಿಲಮ್‌ಕೊಣ್ಡ ಮಾಯನೆನ್ನಪ್ಪ೯ತ೯
ಮಾಯಙ್ಗಳೇ
ಕಾಣುಮ್ ನೆಞ್ಜುಡೈಯೇನೆನಕ್ಕಿನಿ ಯೆನ್ನ ಕಲಕ್ಕಮುಣ್ಡೇ.

ಪ್ರ|| ನೀಳ್ ನಿಲತ್ತೊಡು–ವಿಶಾಲವಾದ ಪೃಥಿವಿಯೊಡನೆ, ವಾ್‌-ಆಕಾಶವೂ (ಊರ್ಧ್ವಲೋಕವೂ), ವಿಯಪ್ಪ–ವಿಸ್ಮಯ.ಪಡುವಂತೆ, ನಿತ್ತ್ಯ–(ರುದ್ರ–ಸುಬ್ರಹ್ಮಣ್ಯಾದಿಗಳಿಂದ) ಪೂರ್ಣವಾದ, ಪೆರುಮ್ ಪೋರ್‌ಕಳ್ – ಮಹಾಯುದ್ಧಗಳನ್ನು, ಶೆಯ್ದು–ಮಾಡಿ, ವಾಣ್ – ಬಾಣಾಸುರನ, ಆಯಿರನ್ದೋಳ್ – ಸಹಸ್ರ ಬಾಹುಗಳನ್ನೂ, ತುಣಿತ್ತದುಮ್–ಕತ್ತರಿಸಿದುದೂ, ಉಳ್ಪಡ–ಮೊದಲಾದ, ಮಱ್ಱುಮ್ ಪಲ–ಮತ್ತೂ ಅನೇಕ ಪ್ರಕಾರವಾಗಿ, ಮಾಣಿಯಾಯ್–(ವಾಮನ) ಬ್ರಹ್ಮಚಾರಿಯಾಗಿ, ನಿಲಮ್‌ಕೊಣ್ಡ–ಭೂಮಿಯನ್ನು ಆಕ್ರಮಿಸಿದ, ಮಾಯ್ಯ– ಕೃತ್ರಿಮರೂಪಿಯಾದ, ಎ್ ಅಪ್ಪರ್ತ–ನನ್ನ ಸ್ವಾಮಿಯಾದ ಕೃಷ್ಣನ, ಮಾಯಙ್ಗಳೇ–ಆಶ್ಚರ್ಯಚೇಷ್ಟಿತಗಳನ್ನೆಲ್ಲಾ, ಕಾಣುಮ್ – ಸಾಕ್ಷಾತ್ಕರಿಸುವ, ನೆಞ್ಜು – ಮನಸ್ಸನ್ನು, ಉಡೈಯೇ್ – ಉಳ್ಳವನಾಗಿದೇನೆ ಇನಿ–ಇನ್ನುಮೇಲೆ, ಎನಕ್ಕು ನನಗೆ, ಎನ್ನ ಕಲಕ್ಕಮುಣ್ಡೇ – ಯಾವ ದೋಷವು ಇರುವುದು ? (ನಾನು ನಿರ್ದೋಷನಾಗಿ ನಿಶ್ಚಿನ್ತನಾಗಿದೇನೆಂದು ಭಾವವು.)

( ಸ–ಗಾ–ರ || )—

ದ್ಯಾವಾಭೂಮಿತಲಾತಿವಿಸ್ಮಯಕರಂ ಮಾಯಾಮಯಂ ಯೋಧನಂ
ಬಾಣಸ್ಯಾಪಿ ಸಹಸ್ರಬಾಹುಮಥನಂ! ಭೂಮೇಶ್ಚ ಮಾನಂ ತಥಾ |
ಶ್ರೀಮದ್ವಾಮನರೂಪಿಣೋಽಪಿ ಚ ಹರೇರ್ನಾಥಸ್ಯ ಮೇ ಚೇಷ್ಟಿತಂ
ಸಂಚಿನ್ತ್ಯಾಸ್ಮಿ ಕೃತೀ ಹೃದೀಹ ವಿವಿಧಂ! ಕ್ಷೋಭೋ ನ ಮೇ ಮಾನಸೇ ||

ತಾ|| ಈ ಭೂಲೋಕವೂ ಊರ್ಧ್ವಲೋಕವೂ ವಿಸ್ಮಯಪಡುವಂತೆ ದೇವತಾನ್ತರಗಳಿಂದ ಕೂಡಿದ ಮಹಾಯುದ್ಧದಲ್ಲಿ ಬಾಣಾಸುರನ ಸಹಸ್ರಬಾಹುಚ್ಛೇದವಂ ಮಾಡಿದುದೂ, ಇದೇ ಮೊದಲಾದ ಅನೇಕ ಕಾರ್ಯಗಳಂ ಮಾಡಿದ ವಾಮನ ಬ್ರಹ್ಮಚಾರಿಯು ಭೂಮಿಯನ್ನು ಆಳಿದ ಮಾಯಾಚೇಷ್ಟಿತನಾದ ನನ್ನ ಸ್ವಾಮಿಯು. ಇವನ ಮಾಯೆಗಳನ್ನೆಲ್ಲಾ ಸಾಕ್ಷಾತ್ಕರಿಸುವ ಮನಸ್ಸುಳ್ಳವನಾಗಿದೇನೆ. ಹೀಗಿರುವಲ್ಲಿ ನನಗೆ ಯಾವ ದೋಷವಿರುವುದು ?

(೯) ಕಲಕ್ಕವೇೞ್‌ಕಡಲೇೞ್‌ಮಲೈ ಯುಲಕೇೞುಮ್
ಕೞಿಯಕ್ಕಡಾಯ್,
ಉಲಕ್ಕತ್ತೇರ್‌ಕೊಡು ಶೆನ್ಱ ಮಾಯಮುಮುಮುಳ್‌ಪಡ
ಮಱ್ಱುಮ್‌ಪಲ,
ವಲಕ್ಕೈಯಾೞಿ ಯಿಡಕ್ಕೈಚ್ಚಙ್ಗಮಿವ್ವೈಯುಡ್ಡೈ
ಮಾಲ್‌ವಣ್ಣನೈ,
ಮಲಕ್ಕುನಾವುಡೈಯೇಱ್ಕು ಮಾಱುಳದೋ
ವಿಣ್ಣುಳ್ಳಮಿರ್ತೈಯೇ

ಪ್ರ॥ ಏಘ್ರುಕಡಲ್ಗೈಯುಮ್ – ಸಪ್ತಸಮುದ್ರಗಳನ್ನೂ, ಏಘ್ರುಮಲೈ – ಸಪ್ತ ಪರ್ವತಗಳನ್ನೂ, ಏಘ್ರುಲಕುಮ್ – ಸಪ್ತಲೋಕಗಳನ್ನೂ, ಕಲಕ್ಕ–ಸೇರುವನ್ತೆ ಮಾಡಿ, ಕಘ್ರಿಯ–ಅಣ್ಡಕಪಾಲದಿಂದ ಆಚೆಗೆ ಹೋಗುವಂತೆ, ಕಡಾಯ್–ನಡೆಸಿ, ತೇರ್‌ಕೊಡು-ರಥವನ್ನು ತೆಗೆದುಕೊಂಡು ಉಲಕ್ಕ ಶೆನ್ದ-ಪೂರ್ತಿಯಾಗಿ ಮೇಲ್ಕೈಲಿ ನಡೆದ, ಮಾಯಮುಮ್–ಆಶ್ಚರ್ಯವೂ, ಉಳ್ಪಡ – ಮೊದಲಾದ, ಮಱ್ಱುಮ್– ಮತ್ತೂ, ಪಲ-ಅನೇಕ ವ್ಯಾಪಾರಗಳುಳ್ಳ, ವಲಕ್ಕೈ ಆಘ್ರಿ-ಬಲಗೈಯಲ್ಲಿ ಚಕ್ರವೂ, ಇಡಕ್ಕೈ ಶಙ್ಗಮ್ ಎಡಗೈಯಲ್ಲಿ ಶಂಖವೂ, ಉಡೈ-(ಇವುಗಳನ್ನು) ಪಡೆದಿರುವ, ಮಾಲ್‌ವಣ್ಣನೈ–ಶ್ಯಾಮಳ ವಿಗ್ರಹಯುಕ್ತನನ್ನು, ಮಲಕ್ಕುಮ್–(ಹರ್ಷಾತಿಶಯ ದಿಂದ) ಭ್ರಮಿಸುವಂತೆ ಮಾಡುವ, ನಾವುಡೈಯೇಱ್ಕು–ನಾಲಿಗೆಯುಳ್ಳ ನನಗೆ, ಇಮ್ಮಣ್ಣಿನ್ ಮಿಶೈ – ಈ ಭೂಮಿಯಮೇಲೆ, ಮಾಱು – ಎದಿರು (ಸಮಾನರು), ಉಳದೋ–ಉಂಟೋ ?

( ಸ–ಗಾ–ರ ॥ )—

**ಸಪ್ತಾಮ್ಭೋಧಿಶತಿಂ ಚ ಸಪ್ತ ಚ ಗಿರೀನ್ ಲೋಕಾಂಶ್ಚ ಸಪ್ತ ಸ್ವಯಂ**
**ಯೋಽಶೀತ್ಯಾಪಿ ರಥಂ ನಯನ್ನತಿತರಾಂ ಮಾಯಾಕ್ರಿಯಾಂ ಚಾಕರೋತ್।**
**ಯಶ್ಚಕ್ರಂ ಚ ಬಿಭರ್ತಿ ದಕ್ಷಿಣಕರೇ ವಾಮೇ ತು ಶಙ್ಖಂ ಚ ತಂ**
**ಸ್ತೋತುಂ ಶ್ಯಾಮಲವರ್ಣಮಸ್ಮಿ ಹಿ ಕೃತೀ! ಕಸ್ಸ್ಯಾತ್ಸಮೋ ಮೇ ಭುವಿ?॥**

ತಾ॥ ಸಪ್ತಸಮುದ್ರಗಳನ್ನೂ ಸಪ್ತಪರ್ವತಗಳನ್ನೂ ಸಪ್ತಲೋಕಗಳನ್ನೂ ಸೇರುವಂತೆ ಮಾಡಿ ಅಣ್ಡಕಪಾಲದಿಂದ ಆಚೆಗೆ ಹೋಗುವಂತೆ ರಥವನ್ನು ಬಹು ದೂರ ನಡೆಸಿದ ಆಶ್ಚರ್ಯವೇ ಮೊದಲಾದ ಅನೇಕ ವ್ಯಾಪಾರಗಳುಳ್ಳ ಶಂಖ ಚಕ್ರ ಧರನಾದ ಶ್ಯಾಮಳಮೂರ್ತಿಯನ್ನೂ ಕೂಡ ಭ್ರಮಿಸುವಂತೆ ಮಾಡುವ ವಾಗ್ಮಿತ್ವ ವುಳ್ಳ ನನಗೆ ಸಮಾನರು ಈ ಭೂಮಿಯಮೇಲೆ ಯಾರಾದರೂ ಉಂಟೋ ?

(೧೦) ಮಣ್ಣೈತ್ತಿರೈ ಪ್ಪೆರುಮ್‌ಪಾರಮ್ ನೀಙ್ಗ
ವೋರ್‌ಪಾರದಮಾ ಪೆರುಮ್‌ಪೋರ್–
ಪಣ್ಣಿ, ಮಾಯಙ್ಗಳ್‌ಶೆಯ್ದು ಶೇನೈಯೈ ಪ್ಪಾಳ್‌ಪಡ
ನೂಱ್ಱಿಟ್ಟುಪ್ಪೋಯ್,
ವಿಣ್‌ಮಿಶೈ ತ್ತನತಾಮಮೇ ಪುಕಮೇವಿಯ
ಶೋದಿತನ್‌ತಾಳ್,
ನಣ್ಣಿ ನಾನ್ ವಣಙ್ಗಿಪ್ಪೆಱ್ಱೇನೆನಕ್ಕಾರ್ ಪಿಱರ್ ನಾಯಕರೇ.

ಪ್ರ|| ಮಣ್ಮಿಶೈ – ಭೂಮಿಯಮೇಲೆ, ಪೆರುಮ್ ಪಾರಮ್–ಮಹಾಭಾರವು, ನೀಙ್ಗ–ನಷ್ಟವಾಗುವಂತೆ, ಓರ್–ಅದ್ವಿತೀಯವಾದ, ಪಾರದಮಾ–ಭಾರತವಾದ, ಪೆರುಮ್ ಪೋರ್–ಮಹಾಯುದ್ಧವನ್ನು, ಪಣ್ಣಿ–ಮಾಡಿ, ಮಾಯಙ್ಗಳ್–ಆಶ್ಚರ್ಯ ಚೇಷ್ಟಿತಗಳನ್ನು, ಶೆಯ್ದು–ಮಾಡಿ, ಶೇನೈಯ್ಯೆ–ಸೇನೆಯನ್ನೆಲ್ಲಾ, ಪಾೞ್ಪಡ–ನಾಶಹೊಂದುವಂತೆ, ನೂಱ್ಱಿಟ್ಟು–ಏರ್ಪಡಿಸಿ ಧ್ವಂಸಮಾಡಿ, ಪೋಯ್–ತನ್ನ ಕಾರ್ಯವಾದಮೇಲೆ (ಈ ಲೋಕದಿಂದ) ಹೋಗಿ, ವಿಣ್ಮಿಶೈ–ಪರಮಪದದಲ್ಲಿ, ತನ ತಾಮಮೇ – ತನ್ನ ವಾಸಸ್ಥಾನದಲ್ಲಿ, ಪುಕಮೇವಿಯ – ಹೋಗಿ ಪ್ರವೇಶಿಸಿದ, ಶೋದಿತ್ತ – ಜ್ಯೋತಿಸ್ಸ್ವರೂಪನಾದ ಕೃಷ್ಣನ, ತಾಳ್–ಪಾದಗಳನ್ನು, ಪಣ್ಣಿ–ಆಶ್ರಯಿಸಿ, ನಾ–ನಾನು, ವಣಙ್ಗಪ್ಪೆಱ್ಱೇ–ನಮಸ್ಕರಿಸಿ ಸೇವಿಸಲು ಭಾಗ್ಯವುಳ್ಳವನಾಗಿದೇನೆ. ಎನಕ್ಕು–ನನಗೆ, ಪಿಱರ್ – ಬೇರೆ, ನಾಯಕರ್–ನಿಯಾಮಕರು, ಆರ್–ಯಾರು ? (ನನಗೆ ಮೇಲ್ಪಟ್ಟವರು ಯಾರು ಇದಾರೆ ?)

( ಸ–ಗಾ–ರ || )—

ಪೃಥ್ವೀಭಾರವಿನಾಶನಾಯ ಸಮರೇ ತಸ್ಮಿನ್ ಪುರಾ ಭಾರತೇ
ಮಾಯಾಚೇಷ್ಟಿತಮದ್ಭುತಂ ಬಹುವಿಧಂ ಕೃತ್ವಾ ಚಮೂನಾಶನಮ್ |
ಏವಂ ಯಃ ಕೃತಕೃತ್ಯ ಏವ ಚ ಪುನರ್ಧಾಮ ಸ್ವಕೀಯಂ ಯಯೌ
ಜ್ಯೋತಿಸ್ತಂ ಪರಮಂ ಪ್ರಣಮ್ಯ ಕೃತಿನಃ ಕಿಂ ಮೇಽಸ್ತಿ ನಾಥೋಽಪರಃ?||

ತಾ|| ಭೂಮಿಯ ಭಾರವೆಲ್ಲಾ ಹೋಗುವಂತೆ ಮಹಾಭಾರತ ಯುದ್ಧವನ್ನು ಮಾಡಿ, ಮಾಯಾಚೇಷ್ಟಿತಗಳನ್ನೆಲ್ಲಾ ನಡೆಸಿ, ಸಕಲಸೈನ್ಯವೂ ನಷ್ಟವಾಗುವಂತೆ ಮಾಡಿ, ತನ್ನ ಕಾರ್ಯ ಪೂರ್ತಿಯಾದಮೇಲೆ ಪರಮಪದಕ್ಕೆ ಹೋಗಿ, ತನ್ನ ವಾಸಸ್ಥಾನದಲ್ಲಿ ಪ್ರವೇಶಿಸಿದ ಜ್ಯೋತಿಸ್ಸ್ವರೂಪನಾದ ಶ್ರೀಕೃಷ್ಣನ ಪಾದಗಳನ್ನು ಆಶ್ರಯಿಸಿರುವ ಭಾಗ್ಯವುಳ್ಳ ನನಗೆ ನಿಯಾಮಕರು ಯಾರಾದರೂ ಉಂಟೋ ? (ನನಗೆ ಮೇಲ್ಪಟ್ಟವರು ಇಲ್ಲವೆಂದು ಭಾವವು)

(೧೧) ನಾಯಕರ್ ಮೊೞುವೇೞುಲಕುಕ್ಕುಮಾಯ್
ಮೊೞುವೇೞುಲಕುಮ್, ತನ್
ವಾಯಕಮ್ ಪುಕವೈತ್ತುಮಿೞ್ನ್ದವೈಯಾಯನ್ನೈ
ಯಲ್ಲನುಮಾಮ್,
ಕೇಶವನಡಿಯಿಣೈಮಿಶೈ ಕ್ಕುರುಕೂರ್ಚ್ಚಡಕೋಪನ್ ಶೊನ್ನ,
ತೂಯವಾಯಿರತ್ತಿಪ್ಪತ್ತಾಲ್ ಪತ್ತರಾವರ್ ತುವಳಿಲ್ಲಿಯೇ.

ಪ್ರ॥ ಮುೞುವೇೞುಲಕುಕ್ಕುಮ್-ಸಮಸ್ತವಾದ (ಸಪ್ತ) ಲೋಕಗಳಿಗೂ, ನಾಯಕನಾಯ್-ಸ್ವಾಮಿಯಾಗಿ, ಮುೞುವೇೞುಲಕುಮ್-ಸಮಸ್ತ (ಸಪ್ತ) ಲೋಕಗಳನ್ನೂ, ತನ್ವಾಯಕಮ್-ತನ್ನ ಬಾಯಿಯಲ್ಲಿ, ಪುಕವೈತ್ತು-ಪ್ರವೇಶಿಸುವಂತೆ ಮಾಡಿ, ಉಮಿೞ್ನ್ದು-ಉಗಿದು, ಅವೈಯಾಯ್-ತದ್ರೂಪಿಯಾಗಿಯೂ, ಅವೈಯಲ್ಲನುಮ್-ತದೀಯದೋಷರಹಿತನಾಗಿಯೂ, ಆಮ್-ಆಗುವ, ಕೇಶವನ್-ಕೇಶಿಯೆಂಬ ಅಸುರನನ್ನು ಕೊಂದ ಕೃಷ್ಣನ, ಅಡಿಯಿಣೈಮಿಶೈ - ಚರಣದ್ವಯವಿಷಯವಾಗಿ, ಕುರುಕೂರ್ ಶಡಕೋಪನ್ - ಶ್ರೀ ಕುರುಕಾಪುರಿಯ ಶಠಾರಿಮುನಿಯು, ಶೊನ್ನ- ಸ್ತೋತ್ರರೂಪವಾಗಿ ರಚಿಸಿದ, ತೂಯ - ಪರಿಶುದ್ಧವಾದ (ನಿರ್ದೋಷವಾದ), ಆಯಿರತ್ತು-ಸಹಸ್ರಪದ್ಯಮಾಲೆಯೊಳು, ಇಪ್ಪತ್ತಾಲ್-ಈ ದಶಕದಿಂದ, ತುವಳಿನ್ಱಿ-ದೋಷವಿಲ್ಲದ, ಪತ್ತರಾವರ್-ಭಕ್ತಿಯಿಂದ ಕೂಡಿದವರಾಗುವರು.

( ಸ-ಗಾ-ರ ॥ )—

ಸಪ್ತಾನಾಂ ಜಗತಾಂ ಚ ನಾಯಕಮಣಿರ್ವ್ಯಸ್ಯಸ್ತಲೋಕೀಂ ಸ್ವಯಂ
ಭುಕ್ತ್ವೋದ್ಗೀರ್ಯ ಚ ತನ್ಮಯೋಽಪಿ ನ ತಥಾ ತಂ ಕೇಶವಂ ಶ್ರೀಪತಿಮ್ ।
ಸ್ತೋತುಂ ಶ್ರೀಕುರುಕಾಪುರೀಪ್ರಭುರಸೌ ದಿವ್ಯಂ ಶಠಾರಿರ್ಜಗೌ
ಸಾಹಸ್ರಂ ತದಿದಂ ಕರೋತಿ ದಶಕಂ ಭಕ್ತಾನನನ್ಯಾಶ್ರಯಾನ್ ॥

ತಾ॥ ಸಮಸ್ತ ಲೋಕಗಳಿಗೂ ನಾಯಕನಾಗಿ, ಸಮಸ್ತ ಲೋಕಗಳನ್ನೂ (ಪ್ರಳಯದಲ್ಲಿ) ತನ್ನ ಬಾಯಿಯಲ್ಲಿ ಪ್ರವೇಶಿಸುವಂತೆ ಮಾಡಿ, ಅವುಗಳನ್ನು (ಸೃಷ್ಟಿಕಾಲದಲ್ಲಿ) ಉಗಿದು, ಆ ಜಗದ್ರೂಪಿಯಾಗಿಯೂ, ತದೀಯ ದೋಷರಹಿತನಾಗಿಯೂ ಆಗುವ ಕೇಶವನ ಚರಣದ್ವಯ ಸ್ತೋತ್ರರೂಪವಾಗಿ ಶ್ರೀ ಶಠಾರಿಮುನಿಯಿಂದ ವಿರಚಿತವಾದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಪಠನ ಮಾಡಿದವರು ನಿರ್ದೋಷವಾದ (ಅನನ್ಯಾಶ್ರಯವಾದ) ಭಕ್ತಿಯಿಂದ ಕೂಡಿದವರಾಗುವರು.

( ದ್ರು-ಉ-ಸಂ ॥ )—

ಆಸನ್ನಶೀತಲಿತವಾಗನುಸನ್ಧಿಧೀಯ
ಕೃಷ್ಣಸ್ಯ ವೀರ್ಯಚರಿತಾನ್ಯಹಮಾದರೇಣ ।
ಇತ್ಥಂ ಪುರಾ ಸ್ವಯಮಪೇಕ್ಷಿತವಾನ್ ಮುನಿಸ್ತ-
ಲ್ಲಬ್ಧ್ವಾ ಸ ನೋಽಸ್ತು ನ ಮಮೇತ್ಯವದಚ್ಚತುರ್ಥೇ ॥

(ದ್ರು-ಉ-ತಾ-ರ || )—

ರಾಸಕ್ರೀಡಾದಿಕೃತ್ಯೈರ್ವಿವಿಧಮುರಳಿಕಾವಾದನೈರ್ಮಲ್ಲಭಙ್ಗೈ-
ರ್ಗೋಪೀಬನ್ಧಾರ್ಹಭಾವಾದ್ವ್ರಜಜನಸಮುಖ್ಯೈಃ ಕಂಸದೈತ್ಯಾದಿಭಙ್ಗೈಃ।
ಪ್ರಾದುರ್ಭಾವೈರ್ನಿಹೀನೇಷ್ವಸುರಭುಜವನಚ್ಛೇದಮುಖ್ಯೈಶ್ಚರಿತ್ರೈ-
ರಾಕರ್ಷೇತ್ ಸರ್ವಚಿತ್ತಂ ಹರಿರಿತಿ ಕಥಯನ್ನಾಸ ಕಾರೇರಪತ್ಯಮ್ ||

(ಈ ಚತುರ್ಥದಶಕದ ಸಾರಾಂಶ)—

ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀ ಕೃಷ್ಣಾವತಾರದ ರಾಸಕ್ರೀಡಾದಿ ವೈಭವವನ್ನು ವರ್ಣಿಸಲು ಉಪಕ್ರಮಿಸಿ—ಗೋಪೀವಿಹಾರ-ಗೋವರ್ಧನೋದ್ಧಾರಣ-ಕಾಳಿಯಮರ್ದನ-ಅನನ್ತಶಯನ-ವೇಣುಗಾನ-ಪಶುಪಾಸನ-ನೀಳಾಸಮಾಶ್ಲೇಷ-ಮಲ್ಲನಿಬರ್ಹಣ-ಮತ್ತಗಜಮರ್ದನ-ದಾಮೋದರಬನ್ಧನ-ಪೂತನಾಸ್ತನ್ಯಪಾನ-ಶಕಟಾಸುರಮರ್ದನ - ಗೋಕುಲವಾಸ - ಕಂಸವಧ-ಬಕವಿದಾರಣ - ವೃಷಭಧ್ವಂಸನ - ಯಮಳಾರ್ಜುನ ಭಞ್ಜನ-ತ್ರಿವಿಕ್ರಮಚರಿತ - ನಾನಾವತಾರಗಳಲ್ಲಿ ಶತ್ರುನಾಶನ-ಬಾಣಾಸುರ ಸಹಸ್ರಬಾಹುಚ್ಛೇದನ-ವೈದಿಕಪುತ್ರಾನಯನ - ಭಾರತಸಮರಮುಖೇನ ಭೂಭಾರಹರಣಾದ್ಯನೇಕಚೇಷ್ಟಿತಗಳನ್ನು ಅನುಸನ್ಧಾನಮಾಡಿ ಅತ್ಯನ್ತ ಹೃಷ್ಟರಾಗಿ—"ನನಗೆ ಸಮಾನರು ಯಾರು ಇದಾರೆ?"— ಎಂದು ತಮ್ಮ ನಿಸ್ಸಮತ್ವವನ್ನು ಹೇಳಿ, ಶ್ರೀಕೃಷ್ಣಾವತಾರ ಚರಿತ್ರಗಳನ್ನೆಲ್ಲಾ ತಾವು ಪ್ರತ್ಯಕ್ಷವಾಗಿ ಅನುಭವಿಸಿದಂತೆಯೇ ವರ್ಣಿಸಿ ಇರುತ್ತಾರೆ.

——:✿:——

ಶ್ರೀಃ

# ಷಷ್ಠ ಶತಕದಲ್ಲಿ—ಪಞ್ಚಮದಶಕ

## (ತುವಳಿಲ್‌ಮಾಮಣಿಮಾಡಮ್—)

(ಈ ಪಞ್ಚಮದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಲ್ಲಿ ಇರುವುದರಿಂದ—ಈ ನಾಯಕಿಯು "ತುಲೈವಿಲ್ಲಿಮಙ್ಗಲಮ್" ಎಂಬ ವರಧನ್ವಿಮಙ್ಗಲಪುರದ ಸ್ವಾಮಿಯ ವಿಷಯದಲ್ಲಿ ಅನುರಾಗವುಳ್ಳವಳಾಗಿದಾಳೆಂದು ಸಖೀ ಜನರು ಮಾತೃವರ್ಗವನ್ನು ಕುರಿತು ಹೇಳುತ್ತಾರೆ.)

---

(೧) ತುವಳಿಲ್ ಮಾಮಣಿಮಾಡಮೋಙ್ಗು
ತೊಲೈವಿಲ್ಲಿಮಙ್ಗಲಮ್ ತೊೞು
ಮಿವಳೈ, ನೀರಿನಿಯನ್ನೈಮೀರುಮಕ್ಕಾಶೈಯಿಲ್ಲೈ
ವಿಡುಮಿನೋ,
ತವಳ ವೊಣ್ ಶಙ್ಗು ಶಕ್ಕರಮೆನ್ಱುಮ್ ತಾಮರೈತ್ತಡಙ್ಗಣೆನ್ಱುಮ್,
ಕುವಳೈ ಯೊಣ್‌ಮಲರ್‌ಕಣ್‌ಕಳ್ ನೀರ್‌ಮಲ್ಕ
ನಿನ್ಱುನಿನ್ಱುಕುಮಿಱುಮೇ.

ಪ್ರ॥ ತುವಳಿಲ್-ನಿರ್ದೋಷವಾದ, ಮಾಮಣಿಮಾಡಮ್ - ಶ್ಲಾಘ್ಯವಾದ ರತ್ನಗಳಿಂದ ನಿರ್ಮಿತವಾದ ಭವನಗಳು, ಓಙ್ಗು-ಉನ್ನತವಾಗಿ ಪ್ರಕಾಶಿಸುವ, ತೊಲೈವಿಲ್ಲಿಮಙ್ಗಲಮ್ - ಶ್ರೀವರಧನ್ವಿಮಂಗಲಪುರವನ್ನು, ತೊೞುಮ್-ಸೇವಿಸುತ್ತಿರುವ, ಇವಳೈ-ಇವಳನ್ನು (ಕುರಿತು), ನೀರ್-ನೀವುಗಳು, ಇನಿ-ಇನ್ನುಮೇಲೆ, ಅನ್ನೈಮೀರ್-ಜನನಿಯರೇ, ಉಮಕ್ಕು-ನಿಮಗೆ, ಆಶೈಯಿಲ್ಲೈ-(ಇವಳು ವಶ್ಯೆಯಾಗುವಳೆಂಬ) ಆಶೆಯು ಇಲ್ಲ ವಿಡುಮಿನ್ - ಆ ಆಶೆಯನ್ನು ಬಿಡಿರಿ. ತವಳ-ಶುಭ್ರವಾದ, ಒಣ್-ರಮ್ಯವಾದ, ಶಙ್ಗು-ಶಂಖವೂ, ಶಕ್ಕರಮ್-ಚಕ್ರವು, ಎನ್ಱುಮ್-ಎಂದು ಹೇಳುವಳು. ತಾಮರೈತ್ತಡಙ್ಗಣ್-ತಾವರೆಯಂತೆ ವಿಶಾಲವಾದ ಕಣ್ಣುಗಳು, ಎನ್ಱುಮ್-ಎಂದು ಹೇಳುವಳು. (ಅಷ್ಟರಲ್ಲೇ-) ಕುವಳೈ ಒಣ್ ಮಲರ್-ಕುವಲಯ

ಪುಷ್ಪದಂತೆ ರಮಣೀಯವಾಗಿ ವಿಕಸಿತವಾದ, ಕಣ್‍ಕಳ್ - (ಇವಳ) ಕಣ್ಣುಗಳು, ನೀರ್‍ಮಲ್‍ಕ-ನೀರುತುಂಬಿಕೊಂಡು, ನಿನ್ರು ನಿನ್ರು-ನಿಂತು ನಿಂತು, ಕುಮಿಱುಮ್-(ಬಿಕ್ಕಿ ಬಿಕ್ಕಿ ಅಳುವ-ಸನ್ತಾಪದಿಂದ) ಒಳಗೆ ಕುದಿಯುತ್ತಿವೆ.

( ಸ-ಗಾ-ರ ॥ )—

ಧ್ಯಾಯನ್ತೀಂ ವರಧನ್ವಿಮಙ್ಗಲಪುರಂ ಶ್ರೀರತ್ನಸೌಧಾಞ್ಚಿತಂ
ತಾಮೇತಾಂ ಪ್ರತಿಮುಞ್ಚತಾದ್ಯ ಸಕಲಾವಶಾಂ ಜನನ್ಯೋಽನಘಾಃ ।
ಸೇಯಂ ಕೀರ್ತಯತೀಹ ತಸ್ಯ ವಿಮಲೇ ಶ್ರೀಶಙ್ಖಚಕ್ರೇ ಹರೇ-
ರ್ನೇತ್ರಾಮ್ಭೋಜಯುಗಂ ಸಬಾಷ್ಪನಯನಾ ಸ್ಥಿತ್ವಾ ಮುಹುರ್ಜಲ್ಪತಿ ॥

ತಾ॥ ದಿವ್ಯರತ್ನಖಚಿತವಾದ ಭವನಗಳಿಂದ ಪ್ರಕಾಶಿಸುವ ಶ್ರೀ ವರಧನ್ವಿ ಮಂಗಲಪುರವನ್ನು ಸೇವಿಸುತ್ತಿರುವ ಇವಳನ್ನು ಕುರಿತು ನೀವು ಇನ್ನುಮೇಲೆ ಆಶೆಯನ್ನು ಬಿಟ್ಟುಬಿಡಿ. ಜನನಿಯರೇ! ಇವಳು ಅವನ ಶಂಖ ಚಕ್ರಗಳನ್ನೇ ಸ್ಮರಿಸುತ್ತಿದಾಳೆ. ಅವನ ಕೆಂದಾವರೆಯಂತಿರುವ ಕಣ್ಣುಗಳನ್ನೇ ವರ್ಣಿಸುತ್ತಿದಾಳೆ. ಹೀಗೆ ಹೇಳುತ್ತಿರುವಾಗಲೇ ಇವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡು ವಿರಹ ಸನ್ತಾಪದಿಂದ ಕುದಿಯುತ್ತಿದೆ.

(೨) ಕುಮಿಱುಮೋಶೈವಿೞ ವೊಲಿ ತೊೞೈವಿಲ್ಲಿಮಙ್ಗಲಮ್
ಕೊಣ್ಡುಪುಕ್ಕು,
ಅಮುದಮೆನ್‍ಮೊೞಿಯಾಳೈ ನೀರುಮಕ್ಕಶ್ಶೈಯಿತ್ತಿ
ಯಾಕಱ್ಱಿನೀರ್,
ತಿಮಿಲ್‍ಕೊಣ್ಡಾಲೊತ್ತು ನಿಱ್ಕುಮ್ಮಱ್ಱಿವಳ್
ತೇವಶೇವಪಿರಾನನ್ತೇ,
ನಿಮಿಯುಮ್ ವಾಯೊಡು ಕಣ್‍ಕಳ್‍ನೀರ್‍ಮಲ್‍ಕ
ನೆಕ್ಕೊತಿನ್ರುಕರೈಯುಮೇ.

ಪ್ರ॥ ಕುಮಿಱುಮ್ ಓಶೈ - ಗಂಭೀರವಾದ ಘೋಷವುಳ್ಳ, ವಿೞ ಒಲಿ- ಉತ್ಸವಗಳ ಕೋಲಾಹಲವುಳ್ಳ, ತೊೞೈವಿಲ್ಲಿಮಙ್ಗಲಮ್ - ಶ್ರೀವರಧನ್ವಿಮಂಗಲ ಪುರದಲ್ಲಿ, ಕೊಣ್ಡುಪುಕ್ಕು-ಕರೆದುಕೊಂಡುಹೋಗಿ ಅಲ್ಲಿ ಪ್ರವೇಶಿಸಿ, ಅಮುದಮ್- ಅಮೃತದಂತೆ ಸರಸವಾಗಿ ಮೃದುವಾದ, ಮೊೞಿಯಾಳೈ-(ಸುಕುಮಾರ) ಭಾಷಣ

ವುಳ್ಳ ಇವಳನ್ನು, ನೀರ್–ನೀವುಗಳು, ಉಮಕ್ಕು ಆಶ್ವೈಯಿನ್ರಿ –ನಿಮಗೆ ಆಶೆಯಿಲ್ಲದೆ ಇರುವುದರಿಂದ, ಅಕರ್ರಿನೀರ್ – ನಿಮ್ಮನ್ನು ಬಿಟ್ಟುಹೋಗುವಂತೆ ಮಾಡಿದಿರಿ. ಇವಳ್–ಇವಳು, ತಿಮಿರ್ಕೊಣ್ಡಾಲೊತ್ತು – ಭ್ರಮವುಳ್ಳವಳಂತೆ, ನಿಱ್ಕುಮ್–(ಮಾತನಾಡದೆ) ನಿಂತಿರುವಳು, ಮಱ್ಱು – ಮತ್ತೂ, ತೇವತೇವ ಪಿರಾನೆನೇ–ನಿತ್ಯಸೂರಿಗಳಿಗೆ ಅಧಿಪತಿಗಳಾದ ವಿಷ್ವಕ್ಸೇನಾದಿಗಳಿಗೂ ಸ್ವಾಮಿಯು, ಎನೇ-ಎಂದೇ ನಿಮಿಯುಮ್ ವಾಯೊಡು–ಮಧುರಸ್ವರವುಳ್ಳ, (ಪರಿಹಾಸವುಳ್ಳ) ಬಾಯಿಯುಳ್ಳವಳಾಗಿ, ಕಣ್‍ಕಳ್ ನೀರ್‍ಮಲ್ಕ-ಕಣ್ಣುಗಳಲ್ಲಿ ನೀರುತುಂಬಿಕೊಂಡು, ನೆಕ್ಕು-ಶಿಥಿಲೆಯಾಗಿ, ಒಶಿನ್ದು–ಶ್ರಾನ್ತೆಯಾಗಿ, ಕರೈಯುಮ್– ದ್ರವೀಭೂತೆಯಾಗುತ್ತಿದಾಳೆ.

( ಸ–ಗಾ–ರ ॥ )—

ಯೂಯಂ ಶ್ರೀವರಧನ್ವಿಮಙ್ಗಲಪುರಂ ಪ್ರತ್ಯಂ ಪ್ರವಿಶ್ಯಾನಯಾ
ಶ್ರೀದಿವ್ಯೋತ್ಸವಘೋಷಭೂಷಿತಮಿಮಾಂ ದಿವ್ಯಾಮೃತೋಕ್ತಿಂ ಪ್ರತಿ ।
ಆಶಾವರ್ಜಿತಮಾನಸಾಸ್ಸ್ಥ ! ಉದಿಯಂ ಭ್ರಾನ್ತಾ ಚ ಸಂಸ್ಮೃತ್ಯ ತಂ
ದೇವ ನಾಮಧಿದೇವಮೇವ ಸತತಂ ಸಾಶ್ರುರ್ದ್ರುತಾಙ್ಗಾ ಸ್ವಯಮ್ ॥

ತಾ॥ ಉತ್ಸವಕೋಲಾಹಲದ ಘೋಷವುಳ್ಳ ಶ್ರೀವರಧನ್ವಿಮಙ್ಗಲಪುರಕ್ಕೆ ಇವಳನ್ನು ಕರೆದುಕೊಂಡುಹೋಗಿ ಬಿಟ್ಟು ಅಮೃತದಂತೆ ಸರಸಭಾಷಣವುಳ್ಳ ಇವಳಮೇಲೆ ನಿಮಗೆ ಆಶೆಯಿಲ್ಲದಂತೆ ಮಾಡಿಕೊಂಡಿರಿ. ಇವಳು ಹುಚ್ಚು ಹಿಡಿದಂತೆ ಭ್ರಾನ್ತೆಯಾಗಿ ನಿಂತಿರುವಳು—ಮತ್ತು ದೇವದೇವಾಧೀಶ್ವರನೆಂದು ತನ್ನ ಮಧುರಸ್ವರದಿಂದ ಅವನನ್ನೇ ಕೀರ್ತನಮಾಡುತ್ತ, ಕಣ್ಣುನೀರು ತುಂಬಿಕೊಂಡು ಶಿಥಿಲೆಯಾಗಿ ದ್ರವೀಭೂತೆಯಾಗುತ್ತಿದಾಳೆ.

(೩) ಕರೈಕೊಳ್ ಪೈಮ್ಪೊಳಿಲ್ ತಣ್‍ಪಣೈ
ತ್ತೊಲೈವಿಲ್ಲಿಮಙ್ಗಲಮ್ ಕೊಣ್ಡುಪುಕ್ಕು,
ಉರೈಕೊಳಿನ್ಮೊಳಿಯಾಳೈ ನೀರುಮಕ್ಕಾಶೈಯಿನ್ರಿ
ಯಕಱ್ಱಿನೀರ್,
ತಿರೈಕೊಳ್ ಪೌವತ್ತು ಚ್ಚೇರ್‍ನ್ದದುಮ್ ತಿಶೈಞಾಲಮ್
ತಾವಿಯಳನ್ದದುಮ್,
ನಿರೈಕೊಳ್ ಮೇಯ್‍ತ್ತದುಮೇ ಪಿದಱ್ಱಿ
ನೆಡುಙ್ಕಣ್ಣೀರ್‍ಮಲ್ಕ ನಿಱ್ಕುಮೇ.

ಪ್ರ|| ಕರೈಕೊಳ್-ತಾಮ್ರಪರ್ಣೀನದೀತೀರವನ್ನು ಆಕ್ರಮಿಸಿ, ಪೈ-ವಿಸ್ತೀರ್ಣವಾದ, ಪೊೞಿಲ್-ಉದ್ಯಾನವುಳ್ಳ, ತಣ್-ಶೀತಲವಾದ, ಪಣೈ-ನೀರುಳ್ಳ ಕ್ಷೇತ್ರಗಳಿಂದ ಕೂಡಿದ, ತೊಲೈವಿಲ್ಲಿಮಙ್ಗಲಮ್ – ಶ್ರೀವರಧನ್ವಿಮಙ್ಗಲಪುರದಲ್ಲಿ, ಕೊಣ್ಡುಪುಕ್ಕು-ಕರೆದುಕೊಂಡುಹೋಗಿ ಪ್ರವೇಶಿಸಿ, ಉರೈಕೊಳ್-ಲೋಕವೆಲ್ಲಾ ಕೊಂಡಾಡುವಂತೆ, ಇನ್ ಮೊೞಿಯಾಳೈ ಮಧುರಭಾಷಿತವುಳ್ಳ ಇವಳನ್ನು, ನೀರ್-ನೀವು, ಉಮಕ್ಕು ಆಶೈಯಿನ್ಱಿ-ನಿಮಗೆ ಆಶೆಯಿಲ್ಲವೆಂದು ಭಾವಿಸಿ, ಅಕಱ್ಱಿನೀರ್-ನಿಮ್ಮನ್ನು ಬಿಟ್ಟು ದೂರಹೋಗುವಂತೆ ಮಾಡಿಬಿಟ್ಟರಿ. ತಿರೈಕೊಳ್-ಉನ್ನತವಾಗಿ ಏಳುವ ಅಲೆಗಳುಳ್ಳ, ಪೌವತ್ತು-ಸಮುದ್ರದಲ್ಲಿ, ಶೇರ್ನ್ದದುಮ್-(ಅವನು) ಶಯನ ಮಾಡಿದುದನ್ನೂ, ತಿಶೈ-ದಿಕ್ಕುಗಳೊಡನೆ ಕೂಡಿದ, ಞಾಲಮ್-ಭೂಮಿಯನ್ನು, ತಾವಿ-ಆಕ್ರಮಿಸಿ, ಅಳನ್ದದುಮ್-ಅಳೆದುಕೊಂಡುದೂ, ನಿರೈಕೊಳ್-ಪಶುಸಂಘಗಳನ್ನು, ಮೇಯ್ತ್ತದುಮೇ-ಮೇಯಿಸಿದ ಸೌಲಭ್ಯ ಕಾರ್ಯವನ್ನೇ, ಪಿದಱ್ಱಿ-ಹೇಳಿ ಹೇಳಿ, ನೆಡುಮ್‌ಕಣ್-ವಿಶಾಲವಾದ ನೇತ್ರಗಳಲ್ಲಿ, ನೀರ್‌ಮಲ್ಕ-ನೀರು ತುಂಬಿಕೊಂಡು, ನಿಱ್ಕುಮೇ-ಸ್ತಬ್ಧೆಯಾಗಿ ನಿಂತಿರುವಳು.

( ಸ-ಗಾ-ರ || )—

ದಿವ್ಯಶ್ರೀವರಧನ್ವಿಮಙ್ಗಲಪುರೇ ನಾನಾತರೂಣಾಂ ಗಣೈ-
ರ್ಯುಕ್ತಂ ತಾಮ್ರಸರೋವರೈರಪಿ ವೃತೇ ರಮ್ಯೇ ಚ ನೀತ್ವಾ ಸ್ವಯಮ್ ।
ಶ್ಲಾಘ್ಯಶ್ರೀಶುಭವಾಚಮಪ್ಯಹಹ ! ತಾಂ ದೂರೇ ತ್ವಕಾರ್ಷ್ಟಾದ್ಯ ಸಾ
ಬಾಷ್ಪಾದ್ರಾರ್ಣಬ್ಧಿಶಯಂ ತ್ರಿವಿಕ್ರಮಮಪಿ ಸ್ಮೃತ್ವಾ ಚ ಗೋಪಾಲಕಮ್||

ತಾ|| ತಾಮ್ರಪರ್ಣೀ ನದೀತೀರದಲ್ಲಿರುವ ಉದ್ಯಾನಗಳಿಂದಲೂ ಜಲಭರಿತವಾದ ಕ್ಷೇತ್ರಗಳಿಂದಲೂ ಕೂಡಿದ ಶ್ರೀವರಧನ್ವಿಮಂಗಲಪುರದಲ್ಲಿ ಮಧುರಭಾಷಿಣಿಯಾದ ಇವಳನ್ನು ಕರೆದುಕೊಂಡುಹೋಗಿ ಬಿಟ್ಟು, ನಿಮಗೆ ಆಶೆಯನ್ನು ನಾಶಪಡಿಸಿಕೊಳ್ಳುವಂತೆ ಮಾಡಿಕೊಂಡಿರಿ. ಅವನ ಕ್ಷೀರಾಬ್ಧಿಶಾಯಿತ್ವವನ್ನೂ, ತ್ರಿವಿಕ್ರಮಾವತಾರವಾಗಿ ಭೂಮಿಯನ್ನು ಅಳೆದುದನ್ನೂ, ಕೃಷ್ಣಾವತಾರದ ಪಶುಪಾಲನಾದಿ ಕೃತ್ಯಗಳನ್ನೂ ಹೇಳಿ ಹೇಳಿ ನೇತ್ರಗಳಲ್ಲಿ ನೀರುತುಂಬಿಕೊಂಡು ಸ್ತಬ್ಧೆಯಾಗುತ್ತಿದಾಳೆ.

(೪) ನಿಱ್ಕುಮ್ ನಾನ್ಮಱೈವಾಣರ್ವಾೞ್
ತೊಲೈವಿಲ್ಲಿಮಙ್ಗಲಮ್ ಕಣ್ಡಪಿನ್,
ಅಱ್ಕುಮೊನ್ಱುಮುಱವುಱಾಳ್ ಮಲಿನ್ದಾಳ್
ಕಣ್ಡೀರಿವಳನ್ನೈಮೀರ್,
ಕಱ್ಕುಮ್ಕಲ್ವಿಯೆಲ್ಲಾಮ್ ಕರುಙ್ಕಡಲ್ವಣ್ಣನ್
ಕಣ್ಣಪಿರಾನೆನ್ಱೇ,
ಒಱ್ಕಮೊನ್ಱುಮಿಲಳುಕನ್ದುಕನ್ದುಳ್ ಮಕಿೞ್ನ್ದು
ಕುೞೈಯುಮೇ.

ಪ್ರ|| ನಿಱ್ಕುಮ್ - ನಿತ್ಯವಾಗಿರುವ, ನಾನ್ಮಱೈ - ನಾಲ್ಕು ವೇದಗಳಿಗೆ, ವಾಣರ್-ನಿರ್ವಾಹಕರಾದವರು, ವಾೞ್-ಬಾಳುತ್ತಿರುವ, ತೊಲೈವಿಲ್ಲಿಮಙ್ಗಲಮ್-ಶ್ರೀವರಧನ್ವಿಮಙ್ಗಲಪುರವನ್ನು, ಕಣ್ಡಪಿನ್-ಕಂಡಮೇಲೆ, ಅಱ್ - ಅಧಿಕವಾಗಿ, ಅಱ್ಕಮ್ ಒನ್ಱುಮ್ - ಸ್ತ್ರೀತ್ವಪ್ರಯುಕ್ತವಾದ ಲಜ್ಜಾದಿ ಗುಣಗಳನ್ನೆಲ್ಲಾ, ಉಱಾಳ್-ಆಶ್ರಯಿಸದೆ ಬಿಟ್ಟಿದಾಳೆ. ಇವಳ್-ಇವಳು, ಮಲಿನ್ದಾಳ್-ಕೈಬಿಟ್ಟು ಹೋದವಳಂತೆ ಎಲ್ಲೆಯನ್ನು ಮೀರಿಹೋಗಿದಾಳೆ. ಅನ್ನೈಮೀರ್ - (ಹೆತ್ತು ಬೆಳೆಸಿದ) ಜನನಿಯರೇ, ಕಣ್ಡೀರ್- ಇವಳ ಈ ದಶೆಯನ್ನು ಕಂಡಿರಷ್ಟೆ. ಕಱ್ಕುಮ್ ಕಲ್ವಿಯೆಲ್ಲಾಮ್-(ಇವಳು) ಅಭ್ಯಾಸಮಾಡಿರುವ ವಿದ್ಯೆಯ ಮಾತೆಲ್ಲಾ, ಕರುಙ್ಕಡಲ್ವಣ್ಣನ್ - ಶ್ಯಾಮಳ ಸಮುದ್ರವರ್ಣನಾದ, ಕಣ್ಣಪಿರಾನ್ - ಶ್ರೀಕೃಷ್ಣ ಸ್ವಾಮಿಯು, ಎನ್ಱೇ-ಎಂದೇ; (ಮತ್ತು) ಒನ್ಱುಮ್ ಒಱ್ಕಮ್-ಯಾವ ವಿಧವಾದ ಭವ್ಯತೆಯೂ, ಇಲಳ್-ಇಲ್ಲದವಳಾಗಿ, ಉಕನ್ದುಕನ್ದು-(ಅವನ ಗುಣಾನುಸನ್ಧಾನದಿಂದ) ಅತ್ಯನ್ತ ಹರ್ಷಪರವಶೆಯಾಗಿ, ಉಳ್ಮಕಿೞ್ನ್ದು - ಅನ್ತರಾಹ್ಲಾದ ಭರದಿಂದ, ಕುೞೈಯುಮ್-ಶಿಥಿಲೆಯಾಗುತ್ತಿದಾಳೆ.

( ಸ-ಗಾ-ರ || )—

ನಿತ್ಯಂ ವೇದಚತುಷ್ಟಯಂ ಶ್ರಿತವತಾಮಾವಾಸಭೂತಂ ಶುಭಂ
ಸೇಯಂ ಶ್ರೀವರಧನ್ವಿಮಙ್ಗಲಪುರಂ ದೃಷ್ಟ್ವೋದ್ಯ ಧಾರ್ಷ್ಟ್ಯಾನ್ವಿತಾ |
ಯೂಯಂ ಪಶ್ಯತ ನೂತನಸ್ತತಮಪ್ಯೇಷಾ ಸ್ಮರನ್ತೀ ಮುದಾ
ಕೃಷ್ಣಂ ವಾರಿಧಿವರ್ಣಮೇವ ಶಿಥಿಲಾ ನೈವಾದ್ಯ ವಶ್ಯಾ ಭವೇತ್ ||

ತಾ|| ನಿತ್ಯವಾದ ನಾಲ್ಕು ವೇದಗಳಲ್ಲಿ ನಿಷ್ಣಾತರಾದವರು ಬಾಳುವ ಶ್ರೀವರ ಧನ್ವಿಮಙ್ಗಲಪುರವನ್ನು ಕಂಡಮೇಲೆ ಇವಳು ಸ್ತ್ರೀತ್ವ ಪ್ರಯುಕ್ತವಾದ ಲಜ್ಜಾದಿ ಗುಣಗಳನ್ನೆಲ್ಲಾ ಬಿಟ್ಟವಳಾಗಿದಾಳೆ. ನಿಮ್ಮ ಕೈಮೀರಿದವಳಾಗಿ ಹೋಗಿದಾಳೆ. ಜನನಿಯರೇ! ಇವಳ ಈ ದಶೆಯನ್ನು ಕಣ್ಣಿನಿಂದ ನೋಡಿದಿರಷ್ಟೆ. ಇವಳು ಕಲಿತಿರುವ ವಿದ್ಯೆಯೆಲ್ಲಾ ನೀಲಮೇಘಶ್ಯಾಮನಾದ ಶ್ರೀಕೃಷ್ಣನ ನಾಮಸಂಕೀರ್ತನವೇ. ಇವಳು ವಿಧೇಯತೆಯನ್ನೆಲ್ಲಾ ಬಿಟ್ಟವಳಾಗಿದಾಳೆ. ಅವನ ಗುಣಾನುಭವದಿಂದಲೇ ಅನ್ತಸ್ಸನ್ತುಷ್ಟೆಯಾಗಿ ಶಿಥಿಲೆಯಾಗುತ್ತಿದಾಳೆ.

(೫) ಕುಱ್ಱಯುಮ್ ವಾಳ್‌ಮುಕತ್ತೇೞೈಯೈ
ತೊಲೈವಿಲ್ಲಿಮಙ್ಗಲಮ್ ಕೊಣ್ಡುಪುಕ್ಕು,
ಇಱ್ಱೈಕೊಳ್ ಶೋದಿ ಚ್ಚೆನ್ದಾಮರೈಕ್ಕಣ್
ಪಿರಾನಿರುನ್ದಮೈ ಕಾಟ್ಟಿನೀರ್,
ಮಱ್ಱಪೆಯ್‌ದಾಲೊಕ್ಕುಮ್ ಕಣ್ಣನೀರಿನೋಡನ್ರು-
ತೊಟ್ಟುಮ್ ಮೆಯ್ಯಾರ್‌ನ್ದಿವಳ್,
ನುಱ್ಱಯುಮ್ ತಿನ್ಹೈಯುಳನ್ನೈಮೀರ್
ತೊೞುಮತ್ತಿಶ್ಶೈಯುಱ್ಱು ನೋಕ್ಕಿಯೇ.

ಪ್ರ|| ಕುಱ್ಱಯುಮ್ – ಸುಕುಮಾರವಾಗಿ, ವಾಳ್–ಪ್ರಕಾಶಮಾನವಾದ, ಮುಕತ್ತು – ಮುಖವುಳ್ಳ, ಏೞೈಯೈ – ದೀನೆಯಾದ ಇವಳನ್ನು, ತೊಲೈವಿಲ್ಲಿಮಙ್ಗಲಮ್ - ಶ್ರೀವರಧನ್ವಿಮಙ್ಗಲಪುರದಲ್ಲಿ, ಕೊಣ್ಡುಪುಕ್ಕು – ಕರೆದುಕೊಂಡು ಹೋಗಿ, ಇಱ್ಱೈಕೊಳ್-ದಿವ್ಯಾಭರಣಾದಿಗಳಿಂದ ಉಂಟಾದ, ಶೋದಿ-ತೇಜಸ್ಸುಳ್ಳವನಾದ, ಶೆನ್ದಾಮರೈಕ್ಕಣ್-ಕೆಂದಾವರೆಯಂತೆ ಕಣ್ಣುಗಳುಳ್ಳ, ಪಿರಾನ್-ಮಹೋಪಕಾರಕನಾದ ಸ್ವಾಮಿಯು, ಇರುನ್ದಮೈ – ಇದ್ದ ಸ್ಥಿತಿಯನ್ನು, ಕಾಟ್ಟಿನೀರ್– (ಇವಳಿಗೆ) ತೋರಿಸಿದಿರಿ. ಅನ್ನೈಮೀರ್–ಜನನಿಯರೇ, ಅನ್ರುತೊಟ್ಟು– ಆದಿನ ಮೊದಲು, ಇವಳ್–ಇವಳು, ಮಱ್ಱಪೆಯ್ದಾಲೊಕ್ಕುಮ್ – ಮಳೆಸುರಿದ್ದಂತೆ ಧಾರೆಯಾಗಿ ಪ್ರವಹಿಸುವ, ಕಣ್ಣನೀರಿನೋಡು–ಕಣ್ಣನೀರಿನೊಡನೆ, ಮೈಯಾನ್ದು– ಭ್ರಾನ್ತೆಯಾಗಿ, ನುಱ್ಱಯುಮ್–ಅವನ ಸೌನ್ದರ್ಯದಲ್ಲಿ ಮಗ್ನವಾದ, ತಿನ್ಹೈಯುಳ್– ಮನಸ್ಸುಳ್ಳವಳಾಗಿ, ಅತ್ತಿಶ್ಶೈ – (ಅವನ) ಆ ದಿಕ್ಕನ್ನು, ಉಱ್ಱು ನೋಕ್ಕಿ–ಚೆನ್ನಾಗಿ ಆದರದಿಂದ ನೋಡಿ, ತೊೞುಮ್–ಅಂಜಲಿಮಾಡುತ್ತಿರುವಳು.

( ಸ–ಗಾ–ರ ॥ )—

ನೀತ್ವೈತಾಂ ವರಧನ್ವಿಮಙ್ಗಲಪುರಂ ದೀಪ್ರಾನನಾಂ ಕೋಮಲಾಂ
ಯೂಯಂ ವಾರಿಜಲೋಚನಂ ತ್ವಕುರುತ ಪ್ರೇಕ್ಷಾಸ್ಪದಂ ಚೋಜ್ಜ್ವಲಮ್।
ಸೇಯಂ ತದ್ದಿವಸಾತ್ ಪ್ರಭೃತ್ಯಹಹ! ಹಾ! ಬಾಷ್ಪಾರ್ದ್ರನೇತ್ರಾ ಭೃಶಂ
ಮೋಹಾನ್ಧಾ ಹೃದಿ ದಿವ್ಯರೂಪನಿರತಾ ಬದ್ಧಾಞ್ಜಲಿಸ್ತದ್ದಿಶೇ ॥

ತಾ॥ ಸುಕುಮಾರವಾಗಿ ಪ್ರಕಾಶಮಾನವಾದ ಮುಖವುಳ್ಳ ದೀನೆಯಾದ ಇವಳನ್ನು ವರಧನ್ವಿಮಂಗಲಪುರಕ್ಕೆ ನೀವು ಕರೆದುಕೊಂಡು ಹೋಗಿ, ದಿವ್ಯಾಭರಣ ಭೂಷಿತನಾದ ಪುಂಡರೀಕಾಕ್ಷನ ಸ್ಥಿತಿಯನ್ನು ಇವಳಿಗೆ ತೋರಿಸಿದಿರಿ ಜನನಿಯರೇ! ಅಂದಿನಿಂದ ಇವಳು ಅಶ್ರುಪೂರಿತನೇತ್ರೆಯಾಗಿ ಭ್ರಾನ್ತೆಯಾಗಿ ಅವನ ಸೌನ್ದರ್ಯದಿಂದ ಮೋಹಿತೆಯಾಗಿ, ಆ ದಿಕ್ಕನ್ನೇ ನೋಡಿ ಆದರದಿಂದ ಅಂಜಲಿಮಾಡುತ್ತಿದ್ದಾಳೆ.

(೬) ನೋಕ್ಕುಮ್‌ಪಕ್ಕಮೆಲ್ಲಾಮ್ ಕರುಮ್ಬೊಡು
ಶೆನ್ನೆಲೋಙ್ಗು ಶೆನ್ದಾಮರೈ,
ವಾಯ್‌ಕ್ಕುಮ್ ತಣ್‌ಪೊರುನಲ್‌ವಡಕರೈ
ವಣ್‌ತೊಲೈವಿಲ್ಲಿಮಙ್ಗಲಮ್,
ನೋಕ್ಕುಮೇಲತ್ತಿಶೈಯಲ್ಲಾಲ್ ಮಱುನೋಕ್ಕಿಲಳ್
ವೈಕಲ್ ನಾಳ್‌ತೊಱುಮ್,
ವಾಯ್‌ಕೊಳ್ ವಾಶಕಮುಮ್ ಮಣಿವಣ್ಣನ್
ನಾಮಮೇ ಯಿವಳನ್ನೈಮೀರ್.

ಪ್ರ॥ ನೋಕ್ಕುಮ್ ಪಕ್ಕಮೆಲ್ಲಾಮ್ – ನೋಡುವ ದಿಕ್ಕುಗಳಲ್ಲೆಲ್ಲಾ, ಕರುಮ್ಬೊಡು–ಕಬ್ಬಿನೊಡನೆ, ಶೆನ್ನೆಲೋಙ್ಗು – ಕೆಂಪುಬತ್ತವು ಬೆಳೆದಿರುವ, ಶೆನ್ದಾಮರೈ ವಾಯ್‌ಕ್ಕುಮ್–ಕೆಂದಾವರೆಯು ಸಮೃದ್ಧವಾಗಿರುವ, ತಣ್–ಶೀತಲವಾದ, ಪೊರುನಲ್‌ವಡಕರೈ–ತಾಮ್ರಪರ್ಣೀನದಿಯ ಉತ್ತರತೀರದಲ್ಲಿರುವ, ವಣ್–ಉದಾರ ಸಮ್ಪತ್ಸಂಪನ್ನವಾದ, ತೊಲೈವಿಲ್ಲಿಮಙ್ಗಲಮ್–ಶ್ರೀವರಧನ್ವಿಮಙ್ಗಲಪುರವನ್ನು, ನೋಕ್ಕುಮೇಲ್–ನೋಡುವ ಪಕ್ಷದಲ್ಲಿ, ಅತ್ತಿಶೈ ಅಲ್ಲಾಲ್–ಆ ದಿಕ್ಕನ್ನು ಬಿಟ್ಟು, ಮಱುನೋಕ್ಕಿಲಳ್ – ಬೇರೆ ಒಂದನ್ನೂ ನೋಡುವುದಿಲ್ಲ. ವೈಕಲ್–ಸರ್ವಕಾಲದಲ್ಲೂ, ನಾಳ್‌ತೊಱುಮ್ – ಪ್ರತಿದಿನವೂ, ಇವಳ್–ಇವಳು, ವಾಯ್‌ಕೊಳ್–ಬಾಯಿನಲ್ಲಿ ಹೇಳುವ, ವಾಶಕಮುಮ್ – ಮಾತುಗಳೂ, ಅನ್ನೈಮೀರ್–ಜನನಿಯರೇ, ಮಣಿವಣ್ಣನ್–ನೀಲಮಣಿವರ್ಣನಾದ ಸ್ವಾಮಿಯ, ನಾಮಮೇ–ನಾಮಗಳೇ.

( ಸ-ಗಾ-ರ || )—

ಸರ್ವತ್ರಾಪಿ ಕಿಲೇಕ್ಷುಶಾಲಿಸರಣಿಂ ವ್ರೀಹ್ಯಾದಿಪದ್ಮಾನಲೀಂ
ದೃಷ್ಟ್ವೇಯಂ ವರಧನ್ವಿಮಙ್ಗಲಪುರೇ ಶ್ರೀತಾಮ್ರಪರ್ಣೀತಟೇ ।
ನಾನ್ಯತ್ ಪಶ್ಯತಿ ಶುಕ್ರಚಿಹ್ನಸತತಂ ತಸ್ಯೈವ ನಾಮಾನ್ಯಹೋ !
ಸಞ್ಜಾತಾರ್ತ್ಯಾಸ್ತಿ ಮುದಾಽನ್ವಿತಾ ಮಣಿನಿಭಾಙ್ಗಸ್ಯಾದ್ಯ ವೈ ನಾತರಃ ||

ತಾ|| ಸರ್ವ ದಿಕ್ಕುಗಳಲ್ಲೂ ಕಬ್ಬು ಮತ್ತು ಕೆಂಪುಬತ್ತ ಬೆಳೆದಿರುವ ಕ್ಷೇತ್ರಗಳಿಂದ ಭರಿತವಾಗಿ, ಕೆಂದಾವರೆ ಪುಷ್ಪಗಳುಳ್ಳ, ತಾಮ್ರಪರ್ಣೀನದಿಯ ಉತ್ತರ ತೀರದಲ್ಲಿರುವ ವರಧನ್ವಿಮಂಗಲಪುರವನ್ನು ನೋಡುವ ಪಕ್ಷದಲ್ಲಿ ಇವಳು ಅದನ್ನು ಬಿಟ್ಟು ಬೇರೆ ಒಂದನ್ನೂ ನೋಡುವುದಿಲ್ಲ ಯಾವಾಗಲೂ ಇವಳ ಬಾಯಿಂದ ಹೊರಡುವ ಮಾತುಗಳೆಲ್ಲಾ ನೀಲಮಣಿವರ್ಣನಾದ ಸ್ವಾಮಿಯ ನಾಮಗಳೇ ಆಗಿವೆ.

(೭) ಅನ್ನೈಮೀರ್ ಅಣಿಮಾಮಯಿಲ್ ಶಿಱುಮಾನಿವಳ್
ನಮ್ಮೈಕ್ಕೈವಲಿನ್ದು,
ಎನ್ನವಾರ್ತ್ತೈಯುಮ್ ಕೇಳ್ಕ್ಕುತ್ತಾಳ್
ತೊಲೈವಿಲ್ಲಿಮಙ್ಗಲಮೆನ್ಱಲ್ಲಾಲ್,
ಮುನ್ನಮ್ ನೋಱ್ಱವಿದಿಕೊಲೋ ಮುಕಿಲ್ವಣ್ಣನ್
ಮಾಯಙ್ಕೊಲೋ, ಅವನ್
ಶಿನ್ನಮುಮ್ ತಿರುನಾಮಮುಮಿವಳ್ ವಾಯನಕಳ್
ತಿರುನ್ದವೇ.

ಪ್ರ|| ಅನ್ನೈಮೀರ್-ಜನನಿಯರೇ, ಅಣಿ-ಸುನ್ದರವಾದ, ಮಾಮಯಿಲ್-ಶ್ಲಾಘ್ಯವಾದ ಬಣ್ಣವುಳ್ಳ ನವಿಲಿನಂತೆ ಇರುವ, ಶಿಱುಮಾನ್ - ಚಿಕ್ಕ ಹುಲ್ಲೇ ಕರುವಿನಂತೆ ಇರುವ, ಇವಳ್ - ಇವಳು, ನಮ್ಮೈ- ನಮ್ಮನ್ನು, ಕೈವಲಿನ್ದು - ಕೈಮೀರಿ, ತೊಲೈವಿಲ್ಲಿಮಙ್ಗಲಮ್-ಶ್ರೀವರಧನ್ವಿಮಂಗಲಪುರವು. ಎನ್ಱು ಅಲ್ಲಾಲ್ -ಎಂಬ ಒಂದು ಮಾತನ್ನು ಬಿಟ್ಟು, ಎನ್ನವಾರ್ತ್ತೈಯುಮ್ - ಮಿಕ್ಕ ಯಾವ ಮಾತನ್ನೂ, ಕೇಳ್ಕ ಉತ್ತಾಳ್-ಕೇಳಲಾರಳು. (ಇದು) ಮುನ್ನಮ್- ಪೂರ್ವದಲ್ಲಿ, ನೋಱ್ಱವಿದಿಕೊಲೋ-(ಇವಳು) ಮಾಡಿದ ವ್ರತದ ಫಲವೋ ? ಮುಕಿಲ್ವಣ್ಣನ್ -ನೀಲಮೇಘಶ್ಯಾಮನ, ಮಾಯಙ್ಕೊಲೋ - ಮಾಯಾಚೇಷ್ಟಿತವೋ ? ಅವನ್ ಶಿನ್ನಮುಮ್-ಅವನ (ಶಂಖ ಚಕ್ರಾದಿ) ಚಿಹ್ನಗಳೂ, ತಿರುನಾಮಮುಮ್-ನಾಮ

ಧೇಯಗಳೂ, ತಿರುನ್ದ-(ಚೆನ್ನಾಗಿ) ಸ್ಪಷ್ಟವಾಗಿ, ಇವಳ್ ವಾಯನಕಳ್-ಇವಳ ಬಾಯಿಂದ ಹೊರಡುತ್ತಿವೆ. (ಇವಳು ಅವುಗಳನ್ನೇ ಯಾವಾಗಲೂ ಹೇಳುತ್ತಿದಾಳೆಂದು ಭಾವವು.)

( ಸ-ಗಾ-ರ || )—

ಸೇಯಂ ರಮ್ಯಮಯೂರಸುನ್ದರಮೃಗೀ ಸೌನ್ದರ್ಯಸೌಭಾಗ್ಯಾನ್ವಿತಾ
ನಾನ್ಯಚ್ಛ್ರೀವರಧನ್ವಿಮಙ್ಗಲಪುರಂ ಪ್ರತ್ನಂ ವಿನಾಽಽಕರ್ಣಯೇತ್ |
ವಶ್ಯಾ ನೈವ ಹಿ ನಃ! ಕಿಮೀದೃಶಮಹೋ ! ಭಾಗ್ಯಂ ಪುರಾ ಚಾರ್ಜಿತಂ?
ಕಿಂ ವಾ ಮಾಯಿಚರಿತ್ರಮೇತದನಿಶಂ ತಚ್ಚಿಹ್ನನಾಮೋಕ್ತಯಃ ? ||

ತಾ|| ಜನನಿಯರೇ! ಸುನ್ದರವಾದ ನವಿಲಿನಂತೆ ಇರುವ ಎಳೇ ಹುಲ್ಲೇ ಕರುವಿಗೆ ಸಮಾನೆಯಾದ ಇವಳು ನಮ್ಮ ಕೈಮೀರಿ ಹೋಗಿರುವುದರಿಂದ ವರಧನ್ವಿ ಮಂಗಲಪುರದ ಹೆಸರನ್ನು ಹೊರತು ಇನ್ನು ಯಾವಮಾತನ್ನೂ ಕೇಳುವುದಿಲ್ಲ. ಇದು ಇವಳ ಪೂರ್ವಪುಣ್ಯದ ಫಲವೋ ? ಆ ನೀಲಮೇಘಶ್ಯಾಮನ ಮಾಯೆಯೋ? ಅವನ ಚಿಹ್ನಗಳೂ ನಾಮಧೇಯಗಳೂ ಯಾವಾಗಲೂ ಇವಳ ಬಾಯಿಂದ ಸಂಕೀರ್ತಿತವಾಗುತ್ತಿವೆ.

(೮) ತಿರುನ್ದು ವೇದಮು ಮ್ ವೇಳ್ವಿಯುಮ್
ತಿರುಮಾಮಕಳಿರುನ್ದಾಮ್, ಮಲಿ
ನ್ದಿರುನ್ದು ವಾೞ್ ಪೊರುನಲ್‌ವಡಕರೈ
ವಣ್‌ತೊಲೈವಿಲ್ಲಿಮಙ್ಗಲಮ್,
ಕರುನ್ದಡಙ್ಕಣ್ಣಿ ಕೈತೊೞುದವನ್ನಾಳ್‌ತೊಡಙ್ಗಿ
ಯಿನ್ನಾಳ್‌ತೊಱುಮ್, ಇರು
ನ್ದಿರುನ್ದರವಿನ್ದಲೋಚನವೆನ್ರೆನ್ರೇ ನೈನ್ದಿರಙ್ಗುಮೇ.

ಪ್ರ|| ತಿರುನ್ದು-(ಭಗವದ್ಗುಣಾದಿಪ್ರಶಂಸೆಯಲ್ಲಿ ಅನ್ಯಾದೃಶಮಾಹಾತ್ಮ್ಯವುಳ್ಳ) ಶ್ಲಾಘ್ಯತಮವಾದ, ವೇದಮುಮ್-ವೇದವೂ, ವೇಳ್ವಿಯುಮ್ - ಭಗವದಾರಾಧನ ರೂಪ (ಯಾಗಾದಿ) ಕರ್ಮಗಳೂ, ತಿರುಮಾಮಕಳಿರುಮ್ - ಸಮ್ಪದ್ವಿಶಿಷ್ಟೆಯಾದ ಲಕ್ಷ್ಮೀದೇವಿಯೂ, ತಾಮ್-ಇವುಗಳೆಲ್ಲಾ ತಾವೇ, ಮಲಿನ್ದು-ಅಭಿವೃದ್ಧವಾಗಿ, ವಾೞ್-ಬಾಳುವ, ಪೊರುನಲ್‌ವಡಕರೈ - ತಾಮ್ರಪರ್ಣಿಯ ಉತ್ತರ ತೀರದಲ್ಲಿ, ವಣ್‌ತೊಲೈವಿಲ್ಲಿಮಙ್ಗಲಮ್ - ಉದಾರವಾದ ಶ್ರೀ ವರಧನ್ವಿಮಂಗಲಪುರವನ್ನು,

ಕರು-ಆಶೆಪಟ್ಟು, ಶಡಙ್ಕಣ್ಣಿ-ವಿಶಾಲನೇತ್ರೆಯಾದ ಇವಳು, ಕೈತೊಟ್ಟುದ-ಅಂಜಲಿ ಮಾಡಿ ಸೇವಿಸಿದ, ಅನ್ನಾಳ್‌ತೊಡಙ್ಗಿ-ಆದಿನ ಮೊದಲು, ಇನ್ನಾಳ್‌ತೊಱುಮ್-ಈದಿನದವರೆಗೆ, ಇರುನ್ದಿರುನ್ದು-ಮನಸ್ಸ್ಥೈರ್ಯದೊಡನೆ ಇದ್ದು, ಅರವಿನ್ದಲೋಚನ-ಪುಣ್ಡರೀಕಾಕ್ಷನೇ!, ಎನ್ನೆನ್ನೇ-ಎಂದು ಅನೇಕಾವೃತ್ತಿ ಹೇಳುತ್ತಲೇ, ನೈನ್ದು-ಶಿಥಿಲೆಯಾಗಿ, ಇರಙ್ಗುಮ್-ಮನಸ್ಸು ಕರಗಿ ಕೊರಗುತ್ತಿದ್ದಾಳೆ.

( ಸ-ಗಾ-ರ ॥ )—

ವೇದೈರ್ಯಜ್ಞಗಣೈಶ್ರಿಯಾ ಚ ಭರಿತಂ ಶ್ರೀತಾಮ್ರಪರ್ಣೀತಟೇ
ಚೋದೀಚ್ಯೇ ವರಧನ್ವಿಮಙ್ಗಲಪುರಂ ಯಸ್ಮಿನ್ ದಿನೇ ಸಾಽಭಜತ್ ।
ತತ್ಕಾಲಾತ್ಪ್ರಭೃತಿ ಸ್ವಯಂ ಶಿಥಿಲಿತಸ್ವಾಙ್ಗಾ ವಿಶಾಲಾಮ್ಬಕಾ
ಸಞ್ಚೀತ್ಯಾಸ್ತ್ಯರವಿನ್ದಲೋಚನನುಹೋ! ನಿತ್ಯಂ ದ್ರುತಸ್ವಾಶಯಾ ॥

ತಾ॥ ಶ್ಲಾಘ್ಯವಾದ ವೇದವೂ, ಭಗವದಾರಾಧನಕರ್ಮಗಳೂ, ಲಕ್ಷ್ಮೀದೇವಿಯೂ ನಿತ್ಯವಾಸಮಾಡುವ ತಾಮ್ರಪರ್ಣೀನದಿಯ ಉತ್ತರ ತೀರದಲ್ಲಿರುವ ತೊಲೈವಿಲ್ಲಿಮಂಗಲವೆಂಬ ಪುರವನ್ನು ಆಶೆಪಟ್ಟು ವಿಶಾಲನೇತ್ರೆಯಾದ ಇವಳು ಅಂಜಲಿ ಮಾಡಿ ಸೇವಿಸಿದ ಆದಿನವೊದಲು, ಈದಿನದವರೆಗೆ ಮನಸ್ಸ್ಥೈರ್ಯದಿಂದ "ಅರವಿನ್ದಲೋಚನ!" ಎಂದೇ ಅನೇಕಾವೃತ್ತಿ ಹೇಳುತ್ತ, ಶಿಥಿಲೆಯಾಗಿ ಕೊರಗುತ್ತಿದ್ದಾಳೆ.

(೯) ಇರಙ್ಗಿ ನಾಳ್‌ತೊಱುಮ್ ವಾಯ್‌ವೆರೀಇ ಇವಳ್
ಕಣ್ಣನೀರ್‌ಕಳಲಮರ,
ಮಯಙ್ಗಿಱ್ಯುಮಿರಙ್ಗುಮ್‌ವಕ್ಕೆ ಮಣಿವಣ್ಣವೋವೆನ್ನು
ಕೂವುಮಾಲ್,
ತುಱಙ್ಗಿವಮ್‌ವಾಯ್‌ಪಿಳನ್ದಾನುತ್ತೈ
ತೊಲೈವಿಲ್ಲಿಮಙ್ಗಲಮೆನ್ನು, ತನ್
ಕರಙ್ಗಳ್‌ಕೂಪ್ಪಿ ತೊಱುಮವ್ವೂರ್
ತಿರುನಾಮಙ್ಗಱ್ಪದನ್ನೈನ್ನುಯೆ.

ಪ್ರ॥ ಇವಳ್-ಇವಳು, ನಾಳ್‌ತೊಱುಮ್-ಪ್ರತಿದಿನವೂ, ಇರಙ್ಗಿ-ಮನಃಕ್ಷೋಭವಂಹೊಂದಿ, ವಾಯ್ ವೆರೀಇ-ಬಾಯಿಂದ ಕನವರಿಸಿ, ಕಣ್ಣನೀರ್‌ಕಳ್-ಕಣ್ಣುನೀರುಗಳು, ಅಲಮರ - ಸುರಿಯುತ್ತ ಭ್ರಾನ್ತೆಯಾಗಿ, ಮಯಙ್ಗಿಱ್ಯುಮ್ -

ಮರಗಳೂ ಕೂಡ, ಇರಙ್ಗುಮ್‌ವಣ್ಣ – ಮೋಹವಶ್ಯವಾಗುವಂತೆ, ಮಣಿವಣ್ಣಾ–ಮಣಿವರ್ಣನೇ! ಎನ್ರು-ಎಂದು, ಕೂವುಮ್–ಕೂಗುತ್ತಿದ್ದಾಳೆ. ತುರಙ್ಗಮ್ ವಾಯ್ – (ಕೇಶಿಯೆಂಬ) ಕುದುರೆಯ ಬಾಯನ್ನು, ಪಿಳನ್ದಾನ್ – ಸೀಳಿದವನು (ಶ್ರೀಕೃಷ್ಣನು), ಉರೈಯುಮ್ – ನಿತ್ಯವಾಸಮಾಡುವ, ತೊಲೈವಿಲ್ಲಿಮಙ್ಗಲಮ್-ಶ್ರೀ ವರಧನ್ವಿಮಙ್ಗಲಪುರ, ಎನ್ರು-ಎಂದು, ಅವ್ವೂರ್ ತಿರುನಾಮಮ್ – ಆ ಊರಿನ ನಾಮಧೇಯವನ್ನು, ಕತ್ತನಳವೇಯೇ – ಕಲಿತುಕೊಂಡಪೊಡನೆಯೇ, ತನ ಕರಙ್ಗಳ್ - ತನ್ನ ಕೈಗಳನ್ನು, ಕೂಪ್ಪಿ–ಅಂಜಲಿಮಾಡಿ, ತೊಳುಮ್-ಸೇವಿಸುತ್ತಿದ್ದಾಳೆ.

( ಸ-ಗಾ-ರ ॥ )—

ನಿತ್ಯಂ ಸಾಶ್ರುಭರಾ ಹೃದಿ ಭ್ರಮವಶಾ ವಾಚಿ ಸ್ವಯಂ ಚಾಪಲಾ –
ಜ್ಜಲ್ಪನ್ತೀ ಚ ತರೂನಪಿ ದ್ರವಯತಿ ಧ್ಯಾತ್ವಾ ಮಣೀನ್ದ್ರಪ್ರಭಮ್ ।
ಆಹೂಯಾಪಿ ಚ ಕೇಶಿವಕ್ತ್ರದಳನಸ್ಯಾವಾಸಭೂತಂ ಶುಭಂ
ಸೇಯಂ ಶ್ರೀವರಧನ್ವಿಮಙ್ಗಲಪುರಂ ಸಙ್ಕೀರ್ತ್ಯ ಬದ್ಧಾಞ್ಜಲಿಃ ॥

ತಾ॥ ಇವಳು ಪ್ರತಿದಿನವೂ ಮನಃಕ್ಷೋಭದಿಂದ ಕನವರಿಸುತ್ತ, ಕಣ್ಣು ನೀರು ತುಂಬಿ ಭ್ರಾನ್ತೆಯಾಗಿ, ಮರಗಳೂ ಕೂಡ ಮೋಹವಶ್ಯವಾಗುವಂತೆ, "ಎಲೈ ಮಣಿವರ್ಣನೇ!" ಎಂದು ಕೂಗುತ್ತಿದ್ದಾಳೆ. ಕೇಶಿವಕ್ತ್ರದಾರಕನಾದ ಶ್ರೀಕೃಷ್ಣನ ನಿತ್ಯವಾಸಸ್ಥಲವಾದ ವರಧನ್ವಿಮಂಗಲಪುರ-ಎಂಬ ಆ ಊರಿನ ಹೆಸರನ್ನು ಇವಳು ಕಲಿತುಕೊಂಡ ಒಡನೆಯೇ ತನ್ನ ಕೈಗಳನ್ನು ಜೋಡಿಸಿ ಸದಾ ಅಂಜಲಿಮಾಡಿ ಸೇವಿಸುತ್ತಿದ್ದಾಳೆ.

(೧೦) ಪಿನ್ನೈಕೊಲ್ ನಿಲಮಾಮಕಳ್‌ಕೊಲ್
ತಿರುಮಕಳ್‌ಕೊಲ್ ಪಿಱನ್ದಿಟ್ಟಾಳ್,
ಎನ್ನಮಾಯಙ್ಕೊಲೋ ಇವಳ್‌ನೆಡುಮಾಲೆನ್ಱೇ
ನಿನ್ರುಕೂವುಮಾಲ್,
ಮುನ್ನಿ ವನ್ದವನ್ ನಿನ್ರಿರುನ್ದುಱೈಯುಮ್
ತೊಲೈವಿಲ್ಲಿಮಙ್ಗಲಮ್,
ಶೆನ್ನಿಯಾಲ್ ವಣಙ್ಗುಮವ್ವೂರ್ ತಿರುನಾಮಙ್ಕೇಳ್ಪದು
ಶಿನ್ದೈಯೇ

ಪ್ರ || ಪಿನ್ನೈಕೊಲ್ -(ಅತ್ಯನ್ತ ಪ್ರಿಯೆಯಾದ) ನೀಳಾದೇವಿಯೋ, ನಿಲಮಾಮಕಳ್‌ಕೊಲ್-(ಶ್ಲಾಘ್ಯೆಯಾದ) ಭೂದೇವಿಯೋ, ತಿರುಮಕಳ್‌ಕೊಲ್-(ನಿರತಿಶಯ ಸಮ್ಪದ್ರೂಪೆಯಾದ) ಲಕ್ಷ್ಮೀದೇವಿಯೋ, ಪಿಱನ್ದಿಟ್ಟಾಳ್ - ಹೀಗೆ ಹುಟ್ಟಿದಾಳೆ. (ಇದು) ಎನ್ನಮಾಯಙ್ಗೊಲೋ - ಏನುಮಾಯೆಯೋ, ಇವಳ್-ಇವಳು, ನೆಡುಮಾಲೆನ್ನೇ-ಅವನ ವ್ಯಾಮೋಹಾತಿಶಯವನ್ನು ಹೇಳಿಯೇ, ನಿನ್ಱು ಕೂವುಮಾಲ್ - ನಿಂತು ಕೂಗುತ್ತಿದಾಳಲ್ಲವೇ; (ಮತ್ತು) ಅರ್ವ ಮುನ್ನಿವನ್ದು-ಅವನು ಮುಂಚಿತವಾಗಿ ಬಂದು, ನಿನ್ಱಿರುನ್ದು-ನಿಂತು ಇದ್ದು, ಉಱೈಯುಮ್-ನಿತ್ಯವಾಸಮಾಡುತ್ತಿರುವ, ತೊಲೈವಿಲ್ಲಿಮಙ್ಗಲಮ್ - ಶ್ರೀವರಧನ್ವಿಮಙ್ಗಲಪುರವನ್ನು, ಶೆನ್ನಿಯಾಲ್ - ತಲೆಯಿಂದ, ವಣಙ್ಗುಮ್ - ನಮಸ್ಕರಿಸುತ್ತಿದಾಳೆ. ಅವ್ವೂರ್ - ಆ ಊರಿನ, ತಿರುನಾಮಮ್ - ನಾಮಧೇಯವನ್ನು, ಕೇಳ್ಪದೇ - ಕೇಳೋಣವೇ, ಶಿನ್ದೈ- ಇವಳಿಗೆ ಪ್ರಿಯವಾದ ನಿತ್ಯಸ್ಮರಣವಾಗಿದೆ.

( ಸ-ಗಾ-ರ || )—

**ನೀಳಾ ಕಿಂ ಧರಣೀ ಕಿಮು ಸ್ವಯಮಿಯಂ ಶ್ರೀರೇವ ವಾ ಜನ್ಮತಃ**
**ಕಿಂ ಕಿಂ ವಾಽದ್ಭುತಮಸ್ಯ ಮುಗ್ಧಚರಿತಂ ಸ್ಮೃತ್ವಾಽಽಹ್ವಯತ್ಯೇವ ತಮ್ |**
**ತದ್ವಾಸಂ ವರಧನ್ವಿಮಙ್ಗಲಪುರಂ ಪ್ರತ್ನಂ ಚ ಮೂರ್ಧ್ನಾ ನಮ -**
**ನ್ತ್ಯೇವೇಯಂ ಸತತಂ ಚ ತತ್ಪುರಮಹಾನಾಮಶ್ರುತಿಂ ಚಿನ್ತಯೇತ್ ||**

ತಾ|| ನೀಳಾದೇವಿಯೋ ಭೂದೇವಿಯೋ ಶ್ರೀದೇವಿಯೋ— ಹೀಗೆ ಹುಟ್ಟಿದಾಳೆ. ಇದು ಏನುಮಾಯೆಯೋ? ಇವಳು ಅವನ ವ್ಯಾಮೋಹಾತಿಶಯವನ್ನೇ ಹೇಳಿ ಕೂಗುತ್ತಿದ್ದಾಳೆ! ಮತ್ತು ಅವನು ಬಂದು ನಿಂತು ವಾಸಮಾಡುತ್ತಿರುವ ವರಧನ್ವಿಮಂಗಲಪುರವನ್ನೇ ಶಿರಸಾ ನಮಸ್ಕರಿಸುತ್ತಿದಾಳೆ ಆ ಊರಿನ ನಾಮಧೇಯವನ್ನು ಕೇಳೋಣವೇ ಅವಳಿಗೆ ಪ್ರಿಯವಾದ ಸ್ಮರಣವಾಗಿದೆ.

(೧೧) ಶಿನ್ದೈಯಾಲುಮ್ ಶೊಲ್ಲಾಲುಮ್
ಶೆಯ್‌ಕೈಯಿನಾಲುಮ್ ತೇವಪಿರಾನ್ನೈಯೇ,
ತನ್ದೈತಾಯೆನ್ಱಡೈನ್ದ ವಣ್‌ಕುರುಕೂರವರ್ ಶಟಕೋಪನ್,
ಮುನ್ದೈಯಾಯಿರತ್ತುಳ್ಳಿವೈ ತೊಲೈವಿಲ್ಲಿಮಙ್ಗಲತ್ತೈ
ಚ್ಚೊನ್ನ,
ಶೆನ್ದಮಿೞ್ ಪತ್ತುಮ್ ವಲ್ಲಾರಡಿಮೈಶೆಯ್‌ವಾರ್
ತಿರುಮಾಲುಕ್ಕೇ.

ಪ್ರ॥ ತೇವಪಿರಾನ್ನೈಯೇ - ದೇವಾಧಿದೇವನಾದ ಸ್ವಾಮಿಯನ್ನೇ, ತನ್ದೈ ತಾಯೆನ್ಱು - ತಂದೆಯೆಂದೂ ತಾಯಿಯೆಂದೂ ನಿಶ್ಚಯಿಸಿ, ಶಿನ್ದೈಯಾಲುಮ್-ಮನಸ್ಸಿನಿಂದಲೂ, ಶೊಲ್ಲಾಲುಮ್-ವಾಕ್ಕಿನಿಂದಲೂ, ಶೆಯ್‌ಕೈಯಿನಾಲುಮ್-ಕೃತ್ಯದಿಂದಲೂ, ಅಡೈನ್ದ-ಆಶ್ರಯಿಸಿದ, ವಣ್‌ಕುರುಕೂರವರ್ ಶಡಕೋಪನ್-ಉದಾರವಾದ ಕುರುಕಾಪುರಿಗೆ ನಿರ್ವಾಹಕರಾದ, ಶ್ರೀ ಶಠಾರಿಮುನಿವರ್ಯರು, ಮುನ್ದೈ-ಪುರಾತನ ವೇದಾರ್ಥಸಾರವಾದ, ಆಯಿರತ್ತುಳ್-ಸಹಸ್ರಪದ್ಯಮಾಲೆಯಲ್ಲಿ, ತೊಲೈವಿಲ್ಲಿಮಙ್ಗಲತ್ತೈಚ್ಚೊನ್ನ - ವರಧನ್ವಿಮಙ್ಗಲಪುರವನ್ನು ಸ್ತುತಿಸಿದ, ಶೆನ್ದಮಿೞ್-ಶ್ಲಾಘ್ಯವಾದ ದ್ರಾವಿಡಭಾಷಾತ್ಮಕವಾದ, ಇವೈಪತ್ತುಮ್-ಈ ಹತ್ತು ಪದ್ಯಗಳನ್ನು, ವಲ್ಲಾರ್-ಬಲ್ಲವರು, ತಿರುಮಾಲುಕ್ಕು-ಶ್ರಿಯಃಪತಿಯಾದ ಸರ್ವೇಶ್ವರನಿಗೆ, ಅಡಿಮೈಶೆಯ್‌ವಾರ್-ನಿತ್ಯಕೈಂಕರ್ಯವನ್ನು ಮಾಡುವವರಾಗುವರು.

( ಶ-ಗಾ-ರ ॥ )—

ಶ್ರೀಶಂ ವಾಙ್ಮನಸಕ್ರಿಯಾಭಿರಸಿತಂ ದೇವಾಧಿದೇವಂ ಹರಿಂ
ಮಾತಾ ಚಾಪಿ ಪಿತೇತ್ಯಯಂ ಶಠರಿಪುಸ್ಸ್ತೋತುಂ ಸಹಸ್ರಂ ಜಗೌ ।
ಮೌನೀ ಶ್ರೀವರಧನ್ವಿಮಙ್ಗಲಪುರಂ ಪ್ರತ್ನಂ ಪ್ರತೀದಂ ಶುಭಂ
ಜ್ಞಾತ್ವಾ ತದ್ದಶಕಂ ರಮಾಪತಿಪದಾಮ್ಭೋಜಾಶ್ರಯಾಸ್ಸ್ಯುರ್ಜನಾಃ ॥

ತಾ॥ ದೇವಾಧಿದೇವನಾದ ಸ್ವಾಮಿಯನ್ನೇ ತಂದೆಯೆಂದೂ ತಾಯಿಯೆಂದೂ ನಿಶ್ಚಯಿಸಿ ಮನೋವಾಕ್ಕಾಯಗಳಿಂದ ಭಜಿಸಿದ ಶ್ರೀ ಕುರುಕಾಪುರಿಯ ಶಠಾರಿ ಮುನಿವರ್ಯರು ಪುರಾತನ ವೇದಾರ್ಥಸಾರರೂಪವಾಗಿ ರಚಿಸಿರುವ ಸಹಸ್ರಪದ್ಯಮಾಲೆಯಲ್ಲಿ ವರಧನ್ವಿಮಂಗಲಪುರದ ಸ್ತುತಿರೂಪವಾದ ಈ ದಶಕವನ್ನು ಬಲ್ಲವರು ಶ್ರಿಯಃಪತಿಯಾದ ಸರ್ವೇಶ್ವರನಿಗೆ ನಿತ್ಯಕೈಂಕರ್ಯವನ್ನು ಮಾಡುವ ಸಾಮ್ರಾಜ್ಯಭಾಗ್ಯವನ್ನು ಪಡೆಯುವರು.

( ದ್ರು-ಉ-ಸಂ ॥ )—

ತಸ್ಯಾಪಿ ಮಾನಸಗತಸ್ಯಾಽನುಭವಸ್ಯ ಬಾಹ್ಯ -
ಸಂಶ್ಲೇಷಣೈಕಪರಚಿತ್ತಮನಶ್ಶರೀರಃ ।
ಆತ್ಮಾನುರಕ್ತಜನಮಾತ್ಮನಿ ನಿಸ್ಪೃಹತ್ವಂ
ನಿಸ್ಯೇಽಧಿಪಞ್ಚಮಮತಿಪ್ರವಣೋಽಚ್ಯುತೇ ಸಃ ॥

( ದ್ರ-ಉ-ತಾ-ರ || )—

ಶಙ್ಖಾಬ್ಜಚಕ್ರಾಪ್ತಿತಶ್ಚ ತ್ರಿದಶಸಾರತಯಾ ಸಿನ್ಧುಶಾಯಿತ್ವಭೂಮ್ನಾ.
ತದ್ವಚೋದಾರಭಾವಾದರುಣಸರಸಿಜಾಕ್ಷತ್ವಚಿಹ್ನೇನ ದೇವಃ |
ದೇವೀಭಿಸ್ಸೇವ್ಯಭಾವಾದತಿಸುಲಭತಯಾ ಸ್ವೇಷ್ವತಿಸ್ನಿಗ್ಧಭಾವಾ-
ದ್ವನ್ಧ್ಯಸ್ತಾನ್ಯಸ್ಮರಾರಿರ್ವಿಘಟಯತಿ ಕಶಾದಿತ್ಯವೋಚಚ್ಛಠಾರಿಃ ||

(ಈ ಪಞ್ಚಮದಶಕದ ಸಾರಾಂಶ)—

ಈ ಐದನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು—ನಾಯಿಕಾರೂಪವನ್ನು ಹೊಂದಿ, ತೊಲೈವಿಲ್ಲಿಮಂಗಲಮ್—ಎಂಬ ವರಧನ್ವಿಮಂಗಲಪುರಕ್ಕೆ ಈ ನಾಯಕಿಯ ಜನನಿಯರು ಇವಳನ್ನು ಕರೆದುಕೊಂಡು ಹೋದುದರಿಂದ ಇವಳು ಅಲ್ಲಿ ನಿತ್ಯವಾಸಮಾಡುವ ಸರ್ವೇಶ್ವರನಾದ ಭಗವನ್ತನಲ್ಲಿ ವ್ಯಾಮೋಹಾತಿಶಯವುಳ್ಳವಳಾಗಿ ತದೇಕಧ್ಯಾನದಿಂದ ಅನವರತ ಚಿನ್ತನ-ಸಂಕೀರ್ತನ-ವನ್ದನಾದಿಗಳಂ ಮಾಡುತ್ತಿದಾಳೆಂದೂ, ಇವಳ ವಿಷಯದಲ್ಲಿ ಆಶೆಯನ್ನು ಬಿಟ್ಟು ಬಿಡಬೇಕೆಂದೂ, ಇದೆಲ್ಲಾ ಆವನ ಮಾಯೆಯೆಂದೂ, ಇವಳ ಸಖಿಯು ಜನನಿಯರನ್ನು ಕುರಿತು ಹೇಳುವಂತೆ—ವರ್ಣಿಸಿ ಇರುತ್ತಾರೆ.

—:✥:—

ಶ್ರೀಃ

## ಷಷ್ಠ ಶತಕದಲ್ಲಿ—ಷಷ್ಠ ದಶಕ.

(ಮಾಲುಕ್ಕು ವೈಯುಮೆಳನ್ದ—)

(ಈ ದಶಕದಲ್ಲಿ—ಶ್ರೀ ಶಠಾರಿಯೆಂಬ ನಾಯಕಿಯ ಜನನಿಯು ವಿರಹಾರ್ತಿಯಾದ ತನ್ನ ಮಗಳು ಆಭರಣ-ಸೌನ್ದರ್ಯ-ಕಾನ್ತ್ಯಾದಿಗಳನ್ನೆಲ್ಲಾ ನಾಯಕನಾದ ಭಗವನ್ತನಿಗೋಸ್ಕರ ಅರ್ಪಿಸಿ ಶಿಥಿಲೆಯಾಗಿದಾಳೆಂದು ಹೇಳುವ ಪ್ರಕಾರವು ವರ್ಣಿಸಲ್ಪಟ್ಟಿದೆ.)

---

(೧) ಮಾಲುಕ್ಕು ವೈಯುಮೆಳನ್ದ ಮಣಾಳರ್ಕ್ಕು,
ನೀಲಕ್ಕರುನಿಱಮೇಕ ನಿಯಾಯಱ್ಕು,
ಕೋಲಚ್ಚೆನ್ದಾಮರೈಕ್ಕಣ್ಣಱ್ಕು, ಎನ್ ಕೊಙ್ಗಲ
ರೇಲಕ್ಕುೞಲಿ ಯಿೞನ್ದದು ಶಙ್ಗೇ

ಪ್ರ॥ ಪಾಲುಕ್ಕು- ಆಶ್ರಿತವ್ಯಾಮೋಹವುಳ್ಳ ಸ್ವಾಮಿಗೆ, ವೈಯಮ್ ಆಳನ್ದ- ಭೂಮಿಯನ್ನು ಆಳಿದ, ಮಣಾಳಱ್ಕು - (ಕನ್ಯೆಯಾದ ತನಗೆ ಪತಿಯಾದ) ವರನಿಗೆ, ನೀಲಕ್ಕರುನಿಱ - ಸ್ನಿಗ್ಧಶ್ಯಾಮಲವರ್ಣವುಳ್ಳ, ಮೇಕ ನಿಯಾಯಱ್ಕು- ಮೇಘಕ್ಕೆ ಸಮಾನನ್ಯಾಯವುಳ್ಳ ಸ್ವಾಮಿಗೆ, ಕೋಲ - ದರ್ಶನೀಯವಾದ, ಶೆನ್ದಾಮರೈ- ಕೆಂದಾವರೆಯಂತೆ ಇರುವ, ಕಣ್ಣಱ್ಕು - ಕಣ್ಣುಗಳುಳ್ಳ ಸ್ವಾಮಿಗೆ, ಎನ-ನನ್ನ, ಕೊಙ್ಗು-ಮಧುಸ್ಯನ್ದಿಯಾದ, ಅಲರ್-ಪುಷ್ಪಗಳುಳ್ಳ, ಏಲಕ್ಕುೞಲಿ- ಏಲಕ್ಕಿಯಂತೆ ಶ್ರಮಹರಗನ್ಧವುಳ್ಳ ಕೇಶಪಾಶದಿಂದ ಕೂಡಿದ ಮಗಳು, ಇೞನ್ದದೆ-ಅರ್ಪಿಸಿದುದು, ಶಙ್ಗೇ-ಕೈಬಳೆಯು (ಶಙ್ಗು ಎಂದು ಕೈಬಳೆಗೆ ಹೆಸರು.)

( ಸ-ಗಾ-ರ ॥ )—

ಶ್ರೀಶಾಯ ಲೋಕಗಣಮಾನಕೃತೇ ಚ ನೀಲಾ-
ಮ್ಭೋದಾಭದಿವ್ಯವಪುಷೇ ಜಲಜಾಮ್ಬಕಾಯ ।
ಸೇಯಂ ಸುತಾ ಮಮ ಮಧುಸ್ರವಿರಮ್ಯಪುಷ್ಪಾ
ಪ್ರಾದಾತ್ಕರಸ್ಯ ವಲಯಂ ಶುಭಗನ್ಧಿಕೇಶೀ ॥

ತಾ॥ ಆಶ್ರಿತವ್ಯಾಮೋಹವುಳ್ಳ ತ್ರಿವಿಕ್ರಮಾವತಾರ ಮೂರ್ತಿಯಾಗಿಯೂ, ತನಗೆ ಪ್ರಿಯತಮನಾದ ವರನಾಗಿಯೂ, ನೀಲಮೇಘಶ್ಯಾಮನಾಗಿಯೂ, ಪುಂಡರೀಕಾಕ್ಷನಾಗಿಯೂ ಇರುವ ಸ್ವಾಮಿಗೆ ಸುಗನ್ಧಿಕೇಶಿಯಾದ ಈ ನನ್ನ ಮಗಳು ತನ್ನ ಕೈಬಳೆಯನ್ನು ಅರ್ಪಿಸಿ ಇದಾಳೆ. (ಅವನಿಗೋಸ್ಕರ ತನ್ನ ಬಳೆಯನ್ನು ಸೋತು ಬಿಟ್ಟಿದಾಳೆ.)

(೨) ಶಙ್ಗುವಿಲ್ವಾಳ್ ತಣ್ಡುಶಕ್ಕರಕ್ಕೈಯಱ್ಕು,
ಶೆಙ್ಗನಿವಾಯ್ ಚ್ಚೆಯ್ಯತಾಮರೈ ಕ್ಕಣ್ಣಱ್ಕು,
ಕೊಙ್ಗಲರ್ ತಣ್ಣನ್ತುೞಾಯ್ಮುಡಿಯಾನುಕ್ಕು, ಎನ
ಮಙ್ಗೈ ಯಿೞನ್ದದು ಮಾಮೈನಿಱಮೇ.

ಪ್ರ॥ ಶಙ್ಗು-ಶಂಖವು, ವಿಲ್-ಧನುಸ್ಸು, ವಾಳ್-ಖಡ್ಗವು, ತಣ್ಡು-ಗದೆಯು, ಶಕ್ಕರ-ಚಕ್ರವು, (ಇವುಗಳನ್ನು) ಕೈಯಱ್ಕು-(ಈ ಪಂಚಾಯುಧಗಳನ್ನು) ಹಸ್ತದಲ್ಲಿ ಧರಿಸಿರುವ ಸ್ವಾಮಿಗೆ, ಶೆಙ್ಗನಿವಾಯ್-ಕೆಂಪಾದ ಪಕ್ವಫಲದಂತೆ ಅಧರವುಳ್ಳ, ಶೆಯ್ಯ-ಕೆಂಪಾದ, ತಾಮರೈ-ತಾವರೆಯಂತೆ ಇರುವ, ಕಣ್ಣಱ್ಕು-ಕಣ್ಣುಗಳುಳ್ಳ ಸ್ವಾಮಿಗೆ, ಕೊಙ್ಗು ಅಲರ್-ಪರಿಮಳಭರಿತವಾಗಿ ವಿಕಸಿತವಾದ, ತಣ್-

ಅಮ್ ತ್ತುಳಾಯ್–ಶ್ರಮಹರವಾಗಿ ದರ್ಶನೀಯವಾದ ತುಳಸಿಯಿಂದ ಅಲಂಕೃತವಾದ, ಮುಡಿಯಾನುಕ್ಕು – ಕಿರೀಟವನ್ನು ಧರಿಸಿರುವ ಸ್ವಾಮಿಗೆ, ಎ಼ ಮಜ್ಞ್–ನನ್ನ ಈ ಸುಕುಮಾರಿಯಾದ ಯುವತಿಯು, ಇ಼ನ್ದದು–ಸಮರ್ಪಿಸಿದುದು (ತಾನು ಅವನಿಗೋಸ್ಕರ ಅರ್ಪಿಸಿ ಅವನಿಗೆ ಸೋತು ಕಳೆದುಕೊಂಡಿರುವುದು), ಮಾಮೈ ನಿ಼ಱಮೇ–ಉತ್ತಮ ಸ್ತ್ರೀಜಾತಿಗೆ ಉಚಿತವಾದ ತನ್ನ ಲಾವಣ್ಯಾದಿ ಕಾನ್ತಿಯು.

( ಸ-ಗಾ-ರ ॥ )—

ಶಙ್ಖಂ ಚ ಚಾಪಮಸಿಚಕ್ರಗದಾಶ್ಚ ಧರ್ತ್ರೇ
ಬಿಮ್ಬಾಧರಾಯ ಸರಸೀರುಹಲೋಚನಾಯ ।
ಸೌಲಭ್ಯರಮ್ಯತುಲಸೀಧರಶೀರ್ಷಕಾಯ
ಸೇಯಂ ಹ್ಯದಾತ್ ಸ್ವತುಭರೂಪಯುತಾಂ ಚ ಶೋಭಾಮ್॥

ತಾ॥ ಶಂಖ ಚಕ್ರ ಗದಾ ಖಡ್ಗ ಶಾರ್ಙ್ಗಧರನಾಗಿಯೂ, ಬಿಂಬಾಧರವುಳ್ಳವನಾಗಿಯೂ, ಪದ್ಮಾಕ್ಷನಾಗಿಯೂ, ದಿವ್ಯಸುಗನ್ಧಿ ತುಲಸೀಮಾಲಾಲಂಕೃತ ಕಿರೀಟಧಾರಿಯಾಗಿಯೂ ಇರುವ ಸ್ವಾಮಿಗೆ, ನನ್ನ ಈ ಸುಕುಮಾರಿಯಾದ ಯುವತಿಯು ತನ್ನ ಶರೀರಕಾನ್ತಿಯನ್ನು ಅರ್ಪಿಸಿ ಇದ್ದಾಳೆ. (ತ್ಯಜಿಸಿ ಇದ್ದಾಳೆ).

(೩) ನಿಱಙ್ಕರಿಯಾನುಕ್ಕು ನೀಡುಲಕುಣ್ಡ
ತಿಱಮ್ ಕಿಳರ್ ವಾಯ್ ಚ್ಚಿಱುಕ್ಕಳ್ವರಮ್ಮುಕ್ಕು,
ಕಱಙ್ಗಿಯ ಶಕ್ಕರಕ್ಕೈಯಮನುಕ್ಕು, ಎನ್
ಪಿಱಙ್ಗಿರುಙ್ಕೂನ್ದಲ್ ಇ಼ನ್ದದು ಪೀಡೇ.

ಪ್ರ॥ ನಿಱಮ್ ಕರಿಯಾನುಕ್ಕು-(ವಟದಳಶಾಯಿಯಾಗಿ) ರೂಪದಲ್ಲಿ ಶ್ಯಾಮಳನಾದವನಿಗೆ, ನೀಡು ಉಲಕು ಉಣ್ಡ–ಮಹಾ ಲೋಕಗಳನ್ನು ಭಕ್ಷಿಸಿದ, ತಿಱಮ್–ಪ್ರಕಾರವು, ಕಿಳರ್- ತೋರುವ, ವಾಯ್–ವಕ್ತ್ರವುಳ್ಳ, ಶಿಱು ಶಿಶುರೂಪದಿಂದಲೇ, ಕಳ್ವರಮ್ಮುಕ್ಕು – (ಲೋಕಗಳನ್ನು ಮರೆಸಿ ಇಟ್ಟ) ವಂಚಕನಾದ ಸ್ವಾಮಿಗೆ, ಕಱಙ್ಗಿಯ-ಸುತ್ತಿ ಸುತ್ತಿ ಭ್ರಮಿಸುತ್ತಿರುವ, ಶಕ್ಕರ-ಚಕ್ರವನ್ನು, ಕೈಯಮನುಕ್ಕು-ಹಸ್ತದಲ್ಲಿ ಧರಿಸಿರುವ ಸ್ವಾಮಿಗೆ, ಎನ್-ನನ್ನ, ಪಿಱಙ್ಗು ಇರುಮ್ ಕೂನ್ದಲ್–ಚೆನ್ನಾಗಿ ಬೆಳೆದು (ನೀಲವರ್ಣದಿಂದ) ರಮ್ಯವಾಗಿರುವ ಕೇಶಗಳುಳ್ಳ ಈ ಕುಮಾರಿಯು, ಇ಼ನ್ದದು-ಸೋತುದು, ಪೀಡೇ – (ತನ್ನ) ಮಹತ್ತ್ವವು. (ಇವಳು ತನ್ನ ಗೌರವಾದಿ ಮಹತ್ತ್ವವನ್ನೆಲ್ಲಾ ಅವನಿಗೋಸ್ಕರ ತ್ಯಜಿಸಿದಾಳೆಂದು ಭಾವವು.)।

( ಸ–ಗಾ–ರ ॥ )—

ನೀಲಾಮ್ಬುದಾಭಮಪಿ ಲೋಕಗಣಾಶಿನಂ ತಂ
ಬಾಲಂ ಹರಿಂ ಸಪದಿ ವಙ್ಕಮಪ್ರಮೇಯಮ್ ।
ಶ್ರೀಚಕ್ರಪಾಣಿಮನುಚಿನ್ತ್ಯ ಸುತಾ ಮಮೇಯಂ
ಚಾಸ್ತೇ ಸ್ವಗೌರವಭರಂ ಚ ಶುಭಂ ತ್ಯಜನ್ತೀ ॥

ತಾ॥ ಶ್ಯಾಮಳವರ್ಣನಾಗಿಯೂ, ವಟಪತ್ರಶಾಯಿಯಾದ ಸರ್ವಲೋಕ ಭಕ್ಷಕನಾದ ಶಿಶುವಾಗಿಯೂ, ಚಕ್ರಪಾಣಿಯಾಗಿಯೂ ಇರುವ ಸ್ವಾಮಿಗೋಸ್ಕರ ನನ್ನ ಸುಕೇಶಿಯಾದ ಕನ್ಯೆಯು ತನ್ನ ಗೌರವವನ್ನು ತ್ಯಜಿಸಿ ಇದ್ದಾಳೆ.

(೪) ಪೀಡುಡೈ ನಾನ್ಮುಕನೈ ಪ್ಪಡೈತ್ತಾನುಕ್ಕು,
ಮಾಡುಡೈ ವೈಯಮಳನ್ದ ಮಣಾಳರ್ಕ್ಕು,
ನಾಡುಡೈ ಮನ್ನರ್ಕ್ಕು ತ್ತೂದುಶೆಯ್ ನಮ್ಬಿಕ್ಕು, ಎನ್
ಪಾಡುಡೈ ಯಲ್ಕುಲ್ಇನ್ದದು ಪಣ್ಬೇ.

ಪ್ರ॥ ಪೀಡು ಉಡೈ-ಜ್ಞಾನಾದಿಗುಣವೈಭವವುಳ್ಳ, ನಾನ್ಮುಕನೈ-ಚತುರ್ಮುಖನನ್ನು, ಪಡೈತ್ತಾನುಕ್ಕು - ಸೃಷ್ಟಿಸಿದ ಸ್ವಾಮಿಗೆ, ಮಾಡುಡೈ-ವಸುಮತಿಯಾದ (ಸಮೃದ್ಧಿಶಿಷ್ಟೆಯಾದ=ಧನವತಿಯಾದ), ವೈಯಮ್-ಭೂಮಿಯನ್ನು, ಅಳನ್ದ-ಅಳೆದ, ಮಣಾಳರ್ಕ್ಕು-(ತನ್ನ) ಪತಿಯಾದ ವರನಿಗೆ, ನಾಡು ಉಡೈ-ರಾಷ್ಟ್ರಕ್ಕೆ ಅಧಿಪತಿಗಳಾದ, ಮನ್ನರ್ಕ್ಕು-ರಾಜರಾದ ಪಾಂಡವರಿಗೆ, ತೂದುಶೆಯ್-ದೂತಕೃತ್ಯವನ್ನು ಮಾಡಿದ, ನಮ್ಬಿಕ್ಕು-(ಐಶ್ವರ್ಯಾದಿ) ಪರಿಪೂರ್ಣನಾದ ಸ್ವಾಮಿಗೆ, ಎನ್-ನನ್ನ, ಪಾಡು ಉಡೈ ಅಲ್ಕುಲ್-ವಿಶಾಲವಾದ ನಿತಂಬವುಳ್ಳ ಈ ಮಗಳು, ಇನ್ದದು-ಸೋತು ಇರುವುದು, ಪಣ್ಬೇ-(ತನ್ನ) ಅಸಾಧಾರಣಸ್ವಭಾವವೇ. (ತನ್ನ ಶೀಲವನ್ನೇ ಅವನಿಗೋಸ್ಕರ ತ್ಯಜಿಸಿದಾಳೆಂದು ಭಾವವು.)

( ಸ–ಗಾ–ರ ॥ )—

ಜ್ಞಾನಾದಿವೈಭವಯುತಂ ಚ ಚತುರ್ಮುಖಂ ತಂ
ಸೃಷ್ಟ್ವಾ ಧರಾಮಪಿ ಚ ಮಾನಮುಖಾದ್ವಿಧೃತ್ಯ ।
ದೌತ್ಯಂ ಚ ಪಾಣ್ಡವಕೃತೇ ವಹತೇ ಸುತೇಯಂ
ಮೇ ವಿಷ್ಣವೇ ಸ್ವಗುಣಶೀಲಮಪಿ ತ್ಯಜನ್ತೀ ॥

ತಾ॥ ಜ್ಞಾನಾದಿ ವೈಭವವುಳ್ಳ ಚತುರ್ಮುಖನನ್ನು ಸೃಷ್ಟಿಮಾಡಿದವನಾಗಿಯೂ, ತ್ರಿವಿಕ್ರಮಾವತಾರದಲ್ಲಿ ಭೂಮಿಯನ್ನು ಆಳೆದವನಾಗಿಯೂ, ಪಾಣ್ಡವದೂತನಾಗಿಯೂ, ಇರುವ ಸ್ವಾಮಿಗೆ ನನ್ನ (ವಿಶಾಲ ನಿತಂಬವುಳ್ಳ) ಈ ಕುಮಾರಿಯು ತನ್ನ ಶೀಲವನ್ನೇ ಸೋತು ಇದಾಳೆ.

(೫) ಪಣ್ಬುಡೈ ವೇದಮ್ ಪಯನ್ದ ಪರನುಕ್ಕು,
ಮಣ್ಪುರೈ ವೈಯಮಿಡನ್ದ ವರಾಹಱ್ಕು,
ತೆಣ್ ಪುನಲ್ ಪಳ್ಳಿ ಯೆಮ್ ತೇವಪಿರಾನುಕ್ಕು, ಎನ್
ಕಣ್ ಪುನೈ ಕೋದೈ ಯಿೞನ್ದದು ಕಱ್ಪೇ.

ಪ್ರ॥ ಪಣ್ಬುಡೈ – (ಭಗವನ್ಮಾಹಾತ್ಮ್ಯಪ್ರಕಾಶಕವಾದ) ಸ್ವಭಾವವುಳ್ಳ, ವೇದಮ್–ವೇದಶಾಸ್ತ್ರವನ್ನು, ಪಯನ್ದ – (ಬ್ರಹ್ಮಾದಿಗಳಿಗೆ) ಪ್ರಕಾಶಪಡಿಸಿದ (ಸಂಪಾದಿಸಿಕೊಟ್ಟ), ಪರನುಕ್ಕು – ಪರಮಪುರುಷನಿಗೆ, ಮಣ್ ಪುರೈ–ಮಣ್ಣಿನ ಆಧಿಕ್ಯವುಳ್ಳ, ವೈಯಮ್–ಭೂಲೋಕವನ್ನು, ಇಡನ್ದ- ಕಿತ್ತು ಮೇಲಕ್ಕೆ ಎತ್ತಿದ, ವರಾಹಱ್ಕು–ವರಾಹಮೂರ್ತಿಗೆ, ತೆಣ್- ನಿರ್ಮಲವಾದ, ಪುನಲ್–ಜಲರಾಶಿಯುಳ್ಳ ಏಕಾರ್ಣವದಲ್ಲಿ, ಪಳ್ಳಿ-ಶಯನಮಾಡಿರುವ, ಎಮ್ ನಮ್ಮ, ತೇವಪಿರಾನುಕ್ಕು–ದೇವಾಧಿದೇವನಿಗೆ, ಎನ್–ನನ್ನ, ಕಣ್ ಪುನೈ–ದೃಷ್ಟ್ಯಾಕರ್ಷಕವಾದ (ಅಲಂಕಾರವಾದ), ಕೋದೈ–ಮಾಲೆಗಳುಳ್ಳ ಈ ಕನ್ಯೆಯು, ಇೞನ್ದದು – ಸೋತುದು, ಕಱ್ಪೇ-ತನ್ನ ಜ್ಞಾನವೇ (ಬುದ್ಧಿಕೌಶಲವೇ.)

( ಸ–ಗಾ–ರ ॥ )—

ವೇದಾರ್ಥವಕ್ತುರಪಿ ತಸ್ಯ ಪರಸ್ಯ ಪುಂಸಃ
ಪೃಥ್ವೀಂ ವರಾಹವಪುಷೋದ್ಧರತೋ ಮುರಾರೇಃ ।
ದೇವೇಶಿತುರ್ಜಲಧಿಶಾಯಿನ ಏವ ವಕ್ಷ್ಯಾ
ಸೇಯಂ ಸ್ರಗೇಷ್ಯಾತತನುಸ್ಸ್ವಮತಿಂ ತ್ಯಜನ್ತೀ ॥

ತಾ॥ ವೇದಪ್ರಕಾಶಕನಾದ ಪರಮಪುರುಷನಾಗಿಯೂ, ಭೂಮ್ಯುದ್ಧಾರವಂ ಮಾಡಿದ ವರಾಹಮೂರ್ತಿಯಾಗಿಯೂ, ಸಮುದ್ರಶಾಯಿಯಾಗಿಯೂ ಇರುವ ದೇವಾಧಿದೇವನಿಗೆ ನನ್ನ ದಿವ್ಯಮಾಲಾಲಂಕೃತೆಯಾದ ಈ ಕನ್ಯೆಯು ತನ್ನ ಜ್ಞಾನವನ್ನೇ (ಬುದ್ಧಿಕೌಶಲವನ್ನೇ) ಸೋತು ಇದಾಳೆ.

(೬) ಕಱ್ಪಕಕ್ಕಾವನ ನಱ್ಪಲತೋಳಱ್ಕು,
ಪೊಱ್ಚುಡರ್ಕುನ್ಱನ್ನ ಪೂನ್ತಣ್ಮುಡಿಯಱ್ಕು,
ನಱ್ಪಲತಾಮರೈ,ನಾಣ್ಮಲರ್ಕ್ಕೈಯಱ್ಕು, ಎನ್
ವಿಱ್ಪುರುವಕ್ಕೊಡಿ ತೋಱ್ಱದು ಮೆಯ್ಯೇ.

ಪ್ರ|| ಕಱ್ಪಕ ಕಾ ಅನ-ಕಲ್ಪವೃಕ್ಷದಂತೆ ಇರುವ, ನಲ್-ಸುನ್ದರವಾದ, ಪಲ ಅನೇಕ, ತೋಳಱ್ಕು-ಬಾಹುಗಳುಳ್ಳ ಸ್ವಾಮಿಗೆ, ಪೊಱ್ಚುಡರ್ ಕುನ್ಱನ್ನ-ಸುವರ್ಣಮಯವಾಗಿ ತೇಜೋವಿಶಿಷ್ಟವಾದ ಪರ್ವತದಂತೆ ಇರುವ, ಪೂನ್ ತಣ್ ಮುಡಿಯಱ್ಕು-ದರ್ಶನೀಯವಾಗಿ ಅಭಿರೂಪವಾದ ಕಿರೀಟವನ್ನು ಧರಿಸಿರುವ ಸ್ವಾಮಿಗೆ, ನಲ್ ಪಲತಾಮರೈ - ರಮ್ಯವಾದ ಅನೇಕವಾದ ತಾವರೆಗಳ, ನಾಣ್ ಮಲರ್ ಕೈಯಱ್ಕು ಆಗತಾನೇ ವಿಕಸಿತವಾದ (ನೂತನವಿಕಾಸವುಳ್ಳ) ಪುಷ್ಪಗಳಂತೆ ಇರುವ ಹಸ್ತಗಳುಳ್ಳ ಸ್ವಾಮಿಗೆ, ಎನ್-ನನ್ನ, ವಿಲ್ ಪುರುವ-ಧನುಸ್ಸಿನಂತೆ ಇರುವ ಹುಬ್ಬುಗಳುಳ್ಳ, ಕೊಡಿ-ಲತೆಯಂತೆ ಸುಕುಮಾರವಾದ ಶರೀರವುಳ್ಳ, ಇವಳು, ತೋಱ್ಱದು-ಸೋತುಹೋದುದು, ಮೆಯ್ಯೇ-ತನ್ನ ಶರೀರವೇ. (ತನ್ನ ಶರೀರವನ್ನೇ ತದ್ವಶವಾಗಿ ಮಾಡಿ ಇದಾಳೆ.)

(ಸ-ಗಾ ರ||)—

ಶ್ರೀಕಲ್ಪವೃಕ್ಷಸಮಬಾಹುಮುದಾರತೇಜೋ-
ಮಾಲಾಭಿರಾಮಕನಕಾದ್ರಿನಿಭಸ್ವಮೌಳಿಮ್ |
ರಮ್ಯಾಬ್ಜಹಸ್ತಮಪಿ ತಂ ಪ್ರತಿ ಕೋಮಲಾಙ್ಗೀ
ಸೇಯಂ ಸುತಾ ಮಮ ನಿಜಾಂ ಚ ತನುಂ ತ್ಯಜನ್ತೀ ||

ತಾ|| ಕಲ್ಪವೃಕ್ಷದಂತೆ ಸುನ್ದರವಾದ ಅನೇಕ ಬಾಹುಗಳುಳ್ಳವನಾಗಿಯೂ, ಸುವರ್ಣಗಿರಿಯಂತೆ ತೇಜೋವಿಶಿಷ್ಟವಾದ ದಿವ್ಯಕಿರೀಟವನ್ನು ಧರಿಸಿರುವವನಾಗಿಯೂ, ನೂತನಪದ್ಮಹಸ್ತನಾಗಿಯೂ ಇರುವ ಸ್ವಾಮಿಗೋಸ್ಕರ ನನ್ನ ಈ ಚಾಪಸದೃಶವಾದ ಭ್ರೂಯುಗ್ಮವುಳ್ಳ ಲತಾಂಗಿಯು ತನ್ನ ಶರೀರವನ್ನೇ ಸೋತು (ಅರ್ಪಿಸಿ) ಇದಾಳೆ.

(೭) ಮೆಯ್ಯಮರ್ ಪಲ್‌ಕಲನ್ ನನ್ಗಣಿನ್ದಾನುಕ್ಕು,
ಪೈಯರವಿನಣೈ ಪ್ಪಳ್ಳಿಯಿನಾನುಕ್ಕು,
ಕೈಯೊಡು ಕಾಲ್‌ಶೆಯ್ಯ ಕಣ್ಣಪಿರಾನುಕ್ಕು, ಎನ್
ತೈಯಲಿೞನ್ದದು ತನ್ನುಡೈ ಚ್ಚಾಯೇ.

ಪ್ರ॥ ಮೆಯ್-ಶರೀರದೊಡನೆ, ಅಮರ್-ಸೇರಿಕೊಂಡಿರುವ, ಪಲ್‌ಕಲನ್- ಅನೇಕ ಆಭರಣಗಳನ್ನು, ನನ್ಗು ಅಣಿನ್ದಾನುಕ್ಕು-ಚೆನ್ನಾಗಿ (ರಮಣೀಯವಾಗಿ) ಧರಿಸಿರುವ ಸ್ವಾಮಿಗೆ, ಪೈ ಅರವಿಣ್ ಅಣೈ-ವಿಸ್ತೃತ ಫಣೆಗಳುಳ್ಳ ಶೇಷಶಯನದ ಮೇಲೆ, ಪಳ್ಳಿಯಿನಾನುಕ್ಕು - ಮಲಗಿರುವ ಸ್ವಾಮಿಗೆ, ಕೈಯೊಡುಕಾಲ್ ಶೆಯ್ಯ- ಕೈಗಳೊಡನೆ ಕಾಲುಗಳೂ ಕೆಂದಾವರೆಯಂತೆ ಇರುವ, ಕಣ್ಣಪಿರಾನುಕ್ಕು- ಶ್ರೀಕೃಷ್ಣಸ್ವಾಮಿಗೆ (ಮಹೋಪಕಾರಕನಾದ ಸ್ವಾಮಿಗೆ), ಎನ್-ನನ್ನ, ಕೈಯಲ್- ವಿಲಕ್ಷಣಸ್ವರೂಪವುಳ್ಳ ಈ ಕನ್ಯೆಯು, ಇೞನ್ದದು-ಅರ್ಪಿಸಿದುದು, ತನ್ನುಡೈ-ತನ್ನ, ಶಾಯೇ - ಕಾನ್ತಿಯೇ. (ತನ್ನ ಲಾವಣ್ಯಕಾನ್ತಿಯನ್ನೇ ಇವಳು ಅರ್ಪಿಸಿ ಬಿಟ್ಟಳೆಂದು ಭಾವವು.)

( ಸ-ಗಾ-ರ ॥ )—

ದಿವ್ಯೈರ್ವಿಶಿಷ್ಟ ಭೂಷಣಗಣೈರಮಿತೈರ್ಲಸನ್ತಂ
ಶ್ರೀಶೇಷಶಾಯಿನಮಿಹಾಮ್ಬುಜಪಾಣಿಪಾದಮ್ ।
ಕೃಷ್ಣಂ ಪ್ರಭುಂ ಪ್ರತಿ ಸುತಾ ಮಮ ಕೋಮಲೇಯಂ
ಲಾವಣ್ಯಮಪ್ಯಹಹ! ಭಾತಿ ನಿಜಂ ತ್ಯಜನ್ತೀ ॥

ತಾ॥ ಅನೇಕ ದಿವ್ಯಾಭರಣ ಭೂಷಿತನಾಗಿಯೂ, ಶೇಷಶಾಯಿಯಾಗಿಯೂ, ಪದ್ಮಸದೃಶ ಹಸ್ತಪಾದನಾಗಿಯೂ ಇರುವ ಶ್ರೀಕೃಷ್ಣಸ್ವಾಮಿಗೆ ನನ್ನ ಈ ವಿಲಕ್ಷಣ ರೂಪವುಳ್ಳ ಕನ್ಯೆಯು ತನ್ನ ಕಾನ್ತಿಯನ್ನು ಅರ್ಪಿಸಿ ಇದಾಳೆ.

(೮) ಶಾಯಕ್ಕುರುನ್ದಮೊಶಿತ್ತ ತಮಿಯಱ್ಕು.
ಮಾಯಚ್ಚಕಡಮುದೈತ್ತ ಮಣಾಳಱ್ಕು
ಪೇಯ್ಚ್ಚಿ ಪಿಣಮ್ಪಡ ಪ್ಪಾಲುಣ್‌ಪಿರಾನುಕ್ಕು, ಎನ್
ವಾಶಕ್ಕುೞಲಿ ಯಿೞನ್ದದು ಮಾಣ್ಬೇ.

ಪ್ರ॥ ಕುರುನ್ದಮ್-(ಅಸುರಾವಿಷ್ಟವಾದ) ಕುನ್ದವೃಕ್ಷವನ್ನು, ಶಾಯ-ಬೇರಿನೊಡನೆ ಬೀಳುವಂತೆ, ಒಶಿತ್ತ-ಮುರಿದ, ತಮಿಯಱ್ಕು-ಅಸಹಾಯವೀರನಾದ ಸ್ವಾಮಿಗೆ, ಶಕಟಮ್-ಶಕಟವನ್ನು (ಅಸುರಾವಿಷ್ಟವಾದ ಬಂಡಿಯನ್ನು), ಮಾಯ-ನಾಶಹೊಂದುವಂತೆ, ಉದೈತ್ತ-ಒದ್ದ, ಮಣಾಳಱ್ಕು (ತನ್ನ ಪತಿಯಾದ) ವರನಿಗೆ, ಪೇಯ್ಚ್ಚಿ-ಪೂತನೆಯೆಂಬ ರಾಕ್ಷಸಿಯನ್ನು, ಪಿಣಮ್‌ಪಡ-ಶವವಾಗಿ ಬೀಳುವಂತೆ, ಪಾಲ್ ಉಣ್ - ಸ್ತನ್ಯಪಾನಮಾಡಿದ, ಪಿರಾನುಕ್ಕು - ಸ್ವಾಮಿಗೆ, ಎನ್-ನನ್ನ, ವಾಶಕ್ಕುೞಲಿ – ಪರಿಮಳಭರಿತವಾದ ಕೇಶಗಳುಳ್ಳ ಈ ಕನ್ಯೆಯು, ಇೞನ್ದದು-ಸೋತುದು, ಮಾಣ್ಬೇ-(ತನ್ನ) ಸ್ತ್ರೀತ್ವದ ಸೌನ್ದರ್ಯವೇ (ತನ್ನ ಸ್ತ್ರೀತ್ವ ವೈಲಕ್ಷಣ್ಯವನ್ನು ಅರ್ಪಿಸಿದಳೆಂದು ಭಾವವು).

( ಸ–ಗಾ–ರ || )—

ಕುನ್ದಾಖ್ಯವೃಕ್ಷ– ಶಕಟಾಸುರ– ಪೂತನಾದಿ–
ಧ್ವಂಸಂ ವಿರಚ್ಯ ವಶಯನ್ತಮಿಮಾಂ ಸುತಾಂ ಮೇ |
ತಂ ಪ್ರತ್ಯನನ್ತಗುಣಮಚ್ಯುತಮುತ್ತಮಾಜ್ಞೇ
ಸೇಯಂ ತ್ಯಜತ್ಯಹಹ! ಸುನ್ದರತಾಂ ಸುಕೇಶೀ ||

ತಾ|| ಕುನ್ದವೃಕ್ಷ— ಶಕಟಾಸುರ— ಪೂತನಾದಿ ರಾಕ್ಷಸ ರಾಕ್ಷಸೀಗಣಗಳನ್ನು ಧ್ವಂಸಮಾಡಿ ಲೋಕೋಪಕಾರವಂ ಮಾಡಿದ ಮಹಾಸ್ವಾಮಿಗೆ ವಶ್ಯೆಯಾದ ಈ ನನ್ನ ಸುಗನ್ಧಿಕೇಶಿಯಾದ ಕನ್ಯೆಯು ತನ್ನ ಸ್ತ್ರೀತ್ವದ ಸೌನ್ದರ್ಯಾದಿ ವೈಲಕ್ಷಣ್ಯವನ್ನೇ (ಅರ್ಪಿಸಿ) ಸೋತುಬಿಟ್ಟು ಇದಾಳೆ.

(೪) ವಣ್ಣಮ್ಮೈ ಕೋಲತ್ತೆಮ್ಮಾಯಕ್ಕುಱಳಱ್ಕು,
ಶೇಣ್‌ಚುಡರ್‌ಕ್ಕುನ್ಱನ್ನ ಶೆಞ್ಚುಡರ್ ಮೂರ್ತ್ತಿಕ್ಕು,
ಕಾಣ್‌ಪೆರುನ್ತೋಱ್ಱತ್ತೆಮ್ ಕಾಕುತ್ತನಮ್ಬಿಕ್ಕು, ಎನ್
ಪೂಣ್‌ಪುನೈ ಮೆನ್ಮುಲೈ ತೋಱ್ಱದು ಪೊತ್ಪೇ.

ಪ್ರ|| ವಣ್ಣಮ್-ಸೌನ್ದರ್ಯವು, ಅಮ್ಮೈ-ಸೇರಿರುವ, ಕೋಲತ್ತು-ಅಲಂಕಾರವುಳ್ಳ, ಎಮ್ ಮಾಯಕ್ಕುಱಳಱ್ಕು-ನಮ್ಮ ಮಾಯಾವಾಮನಮೂರ್ತಿಗೆ, ಶೇಣ್-ಉನ್ನತವಾದ, ಶುಡರ್ ಕುನ್ಱನ್ನ-ತೇಜೋಮಯವಾದ ಪರ್ವತಕ್ಕೆ ಸದೃಶವಾದ, ಶೆಮ್‌ಶುಡರ್ ಮೂರ್ತ್ತಿಕ್ಕು - ರಮ್ಯಕಾನ್ತಿಯುಕ್ತವಾದ ಮೂರ್ತಿಗೆ, ಕಾಣ್-ಸರ್ವಲೋಕದೃಶ್ಯವಾಗಿ, ಪೆರುಮ್ - ಅಪರಿಚ್ಛಿನ್ನಮಾಹಾತ್ಮ್ಯಯುಕ್ತವಾದ, ತೋಱ್ಱತ್ತು-ಆವಿರ್ಭಾವವುಳ್ಳ, ಎಮ್ ಕಾಕುತ್ತನಮ್ಬಿಕ್ಕು-ನಮ್ಮ ಕಾಕುತ್ಸ್ಥನಾದ ಶ್ರೀರಾಮಚನ್ದ್ರನೆಂಬ ಪೂರ್ಣಮೂರ್ತಿಗೆ, ಎನ್-ನನ್ನ, ಪೂಣ್‌ಪುನೈ-ಆಭರಣೋಚಿತವಾದ, ಮೆನ್ಮುಲೈ-ಸುಕುಮಾರವಾದ ಸ್ತನಗಳುಳ್ಳ ಈ ಮಗಳು, ತೋಱ್ಱದು-ಸೋತುದು, ಪೊತ್ಪ್ಪೇ-(ತನ್ನ) ರಮ್ಯವಾದ ರೂಪವೇ.

( ಸ–ಗಾ–ರ || )—

ಸೌನ್ದರ್ಯಶೋಭಿನಮಮುಂ ಪ್ರತಿ ವಾಮನಂ ಶ್ರೀ
ಕಾಕುತ್ಸ್ಥಮದ್ಭುತಗುಣಂ ಮಹಸಾಂ ನಿಧಾನಮ್ ||
ಸಞ್ಚಿನ್ತ್ಯ ಮೇಽದ್ಯ ತನಯಾ ಕುಚಕುಟ್ಮಲಾಢ್ಯಾ
ಸೇಯಂ ತ್ಯಜತ್ಯಹಹ ! ಹನ್ತ ! ನಿಜಂ ಸ್ವರೂಪಮ್ ||

ತಾ|| ಸೌನ್ದರ್ಯವಿಶಿಷ್ಟವಾದ ಅಲಂಕಾರವುಳ್ಳ ವಾಮನಮೂರ್ತಿಯಾಗಿಯೂ, ದಿವ್ಯತೇಜೋಮಯೋನ್ನತ ಕಿರೀಟಧಾರಿಯಾಗಿಯೂ, ಶ್ರೀರಾಮಾವತಾರವಂ ಮಾಡಿ ಕಾಕುತ್ಸ್ಥನೆಂದು ಪ್ರಸಿದ್ಧನಾಗಿ ಮಹಾ ಮಾಹಾತ್ಮ್ಯಭರಿತನಾಗಿಯೂ ಇರುವ ಸ್ವಾಮಿಗೆ ಮೃದುಸ್ತನಿಯಾದ ಈ ನನ್ನ ಕನ್ಯೆಯು ತನ್ನ ರಮ್ಯವಾದ ರೂಪವನ್ನೇ ಸೋತು ಇದಾಳೆ.

(೧೦) ಪೊಲ್ಪವೈ ನೀಣ್ಮುಡಿ ಪೂನ್ದಣ್ದುಳಾಯಱ್ಕು,
ಮಲ್ಪೊರು ತೋಳುಡೈ ಮಾಯಪ್ಪಿರಾನುಕ್ಕು,
ನಿಲ್ಪನ ಪಲ್ಲುರುವಾಯ್ ನಿಱ್ಕುಮ್ ಮಾಯಱ್ಕು, ಎನ್
ಕಱ್ಪುಡೈಯಾಟ್ಟಿ ಯಿೞನ್ದದು ಕಟ್ಪೇ.

ಪ್ರ|| ಪೊಱ್ಪು ಅವೈ–ಸೌನ್ದರ್ಯದಿಂದ ಕೂಡಿದ, ನೀಣ್ಮುಡಿ–ಉನ್ನತವಾದ ಕಿರೀಟವನ್ನೂ, ಪೂಮ್‌-ದರ್ಶನೀಯವಾದ, ತಣ್‌-ಶೀತಳವಾದ, ತುೞಾಯಱ್ಕು–ತುಳಸೀಮಾಲೆಯುಳ್ಳ ಸ್ವಾಮಿಗೆ, ಮಲ್ ಪೊರುತೋಳುಡೈ – ಬಲಿಷ್ಠರಾದ ಮಲ್ಲರೊಡನೆ ಯುದ್ಧಮಾಡುವಷ್ಟು ಬಾಹುಬಲವುಳ್ಳ, ಮಾಯಪ್ಪಿರಾನುಕ್ಕು–ಆಶ್ಚರ್ಯಚೇಷ್ಟಿತನಾದ ಸ್ವಾಮಿಗೆ, ನಿಱ್ಪನ-ಶಾಶ್ವತವಾಗಿದ್ದುಕೊಂಡೇ, ಪಲ್ಲುರುವಾಯ್–ಅನೇಕ ಪದಾರ್ಥರೂಪಿಯಾಗಿಯೂ, ನಿಱ್ಕುಮ್-ನಿಲ್ಲುವವನಾದ (ತದೀಯ ದೋಷರಹಿತನಾದ), ಮಾಯಱ್ಕು-ಆಶ್ಚರ್ಯಕರವಾದ ಸ್ವಭಾವವುಳ್ಳಸ್ವಾಮಿಗೆ, ಎನ್–ನನ್ನ, ಕಱ್ಪುಡೈಯಾಟ್ಟಿ–ಜ್ಞಾನಾತಿಶಯವುಳ್ಳ ಈ ಕನ್ಯೆಯು, ಇೞನ್ದದು–ಸೋತುದು, ಕಟ್ಪೇ-(ತನ್ನ) ಸ್ತ್ರೀತ್ವಮರ್ಯಾದೆಯು (ಮಾನವು).

( ಸ-ಗಾ-ರ || )—

ದಿವ್ಯತ್ಕಿರೀಟವಿಲಸತ್ತುಲಸೀಸಮೇತಂ
ಶ್ರೀಮಲ್ಲಜಿದ್ಭುಜವಿಭೂಷಿತಮಪ್ರಮೇಯಮ್ |
ನಿತ್ಯಂ ಚ ಮಾಯಿನಮನನ್ತಪದಾರ್ಥರೂಪಂ
ಸ್ಮೃತ್ವಾಽದ್ಯ ತಂ ತ್ಯಜತಿ ಸೇಯಮಿಹ ಸ್ವಮಾನಮ್ ||

ತಾ|| ದಿವ್ಯಕಿರೀಟಧಾರಿಯಾಗಿಯೂ, ತುಲಸೀಮಾಲಾಲಂಕೃತನಾಗಿಯೂ, ಬಲಿಷ್ಠರಾದ ಮಲ್ಲರನ್ನು ಜಯಿಸಿದ ಬಾಹುಬಲವಿಶಿಷ್ಟನಾದ ಮಾಯಾಚೇಷ್ಟಿತನಾಗಿಯೂ, ಸರ್ವಪದಾರ್ಥರೂಪಿಯಾಗಿದ್ದಾಗ್ಯೂ ದೋಷಗನ್ಧರಹಿತನಾಗಿಯೂ ಇರುವ ಸ್ವಾಮಿಗೆ ನನ್ನ ಕುಶಲಬುದ್ಧಿಯುಳ್ಳ ಈ ಕನ್ಯೆಯು ತನ್ನ ಸ್ತ್ರೀತ್ವ ಮರ್ಯಾದೆಯನ್ನೇ ಸೋತು ಇದಾಳೆ.

(೧೧) ಕಟ್ಟ್ರೈಲ್ ಶೋಲೈ ನಲ್‌ವೇಙ್ಗಡವಾಣನೈ,
ಕಟ್ಟ್ರೈಲ್ ತ್ತೆನ್‌ಕುರುಕೂರ್ ಚ್ಚಡಕೋಪನ್ ಶೊಲ್,
ಕಟ್ಟ್ರೈಲಾಯಿರತ್ತಿಪ್ಪತ್ತುಮ್ ವಲ್ಲವರ್,
ಕಟ್ಟ್ರೈಲ್ ವಾನವರ್‌ಪೋಕಮುಣ್ಬಾರೇ.

ಪ್ರ॥ ಕಟ್ಟ್ರೈಲ್ ಶೋಲೈ – ವೃಕ್ಷಸಮೂಹಗಳ ಸೌನ್ದರ್ಯದಿಂದ ಕೂಡಿದ ಉದ್ಯಾನಗಳುಳ್ಳ, ನಲ್‌ವೇಙ್ಗಡ – ಮಹಾಮಹಿಮೋಪೇತವಾದ ಶ್ರೀ ವೇಂಕಟಾದ್ರಿಗೆ, ವಾಣನೈ – ಸ್ವಾಮಿಯಾದ ಶ್ರೀನಿವಾಸನನ್ನು, ಕಟ್ಟ್ರೈಲ್ – ಕೋಟೆಗಳ ಸೌನರ್ಯದಿಂದ ಕೂಡಿದ್ದ, ತೆನ್ ಕುರುಕೂರ್–ರಮ್ಯವಾದ ಕುರುಕಾಪುರಿಯ ನಿರ್ವಾಹಕರಾದ, ಶಡಕೋಪನ್–ಶಠಾರಿಮುನಿವರ್ಯರು, ಶೊಲ್–ಸ್ತುತಿಸಿದ, ಕಟ್ಟ್ರೈಲ್–ರಮಣೀಯ ಬನ್ಧವುಳ್ಳ, ಆಯಿರತ್ತು–ಸಹಸ್ರಪದ್ಯಮಾಲೆಯೊಳು, ಇಪ್ಪತ್ತುಮ್–ಈ ದಶಕವನ್ನು, ವಲ್ಲವರು-ಬಲ್ಲವರು, ಕಟ್ಟ್ರೈಲ್–ದಿವ್ಯಶೀಲವೃತ್ತಾದಿ ರಮ್ಯತೆಯುಳ್ಳ, ವಾನವರ್–ನಿತ್ಯಸೂರಿಗಳ, ಪೋಕಮ್–ಭೋಗವನ್ನು, ಉಣ್ಬಾರೇ–ಅನುಭವಿಸುವರು.

( ಸ–ಗಾ–ರ ॥ )—

ಅತ್ಯನ್ತರಮ್ಯತರುಶೋಭಿತ –ವೇಙ್ಕಟಾದ್ರಿ –
ನಾಥಂ ಸ್ತುವನ್ ಹಿ ಕುರುಕಾಪುರರಾಟ್ ಶಠಾರಿಃ ।
ದಿವ್ಯಪ್ರಬನ್ಧಮಿಮಮಾಹ ಸಹಸ್ರಮಾದ್ಯಂ
ತೇ ಸೂರಿಭೋಗಭರಿತಾ ದಶಕಂ ವಿದುರ್ಯೇ ॥

ತಾ॥ ರಮಣೀಯವಾದ ಉದ್ಯಾನಗಳಿಂದ ಕೂಡಿದ ಶ್ರೀ ವೇಂಕಟಾದ್ರಿಗೆ ಸ್ವಾಮಿಯಾದ ಶ್ರೀನಿವಾಸನನ್ನು ದಿವ್ಯಪ್ರಾಕಾರಭರಿತವಾದ ಕುರುಕಾಪುರಿಯ ಶ್ರೀ ಶಠಾರಿಮುನಿಯು ಸ್ತುತಿಸಲು ರಚಿಸಿದ ಸಹಸ್ರಪದ್ಯಮಾಲೆಯೊಳು, ಈ ದಶಕವನ್ನು ಬಲ್ಲವರು ದಿವ್ಯಸೂರಿಗಳ ಭೋಗವನ್ನು ಅನುಭವಿಸುವರು.

( ದ್ರ–ಉ–ಸಂ ॥ )—

ತಸ್ಮಾತ್ಪರಪ್ರವಣತಾಪಿಭವಾತ್ಪರಸ್ಮಿನ್
ಪುಂಸ್ಯೇವ ಪುಂಖಿತಮತಿಃ ಪುರುಷಾರ್ಥಸಾರೇ ।
ಸ್ವಸ್ಯ ಸ್ವಕೀಯವಿಷಯೇಷ್ವಖಿಲೇಷು ಷಷ್ಠೇ
ಸ್ವೀಯತ್ವಬುದ್ಧಿರವಶಾದ್ಗಳಿತೇತ್ಯವೋಚತ್ ॥

(ದ್ರ-ಉ-ತಾ-ರ ॥ )—
ಪಾರವಶ್ಯಾದ್ದೈವೈಷ್ಟ ಪಞ್ಚಾಯುಧವಿಸ್ಮೃತಿಮುಖೈರ್ಬ್ರಹ್ಮಣಸ್ಸ್ವಭಾವಾ-
ದ್ದೇವಾನಾಂ ಸ್ವಾಮಿಭಾವಾದತಿಸುಭಗತಯಾಽಲಙ್ಕೃತೇಃ ಕುನ್ದಭಞ್ಜಾತ್ ।
ಪ್ರಾದುರ್ಭಾವೈಶ್ಚ ಸರ್ವಾನ್ತರನಿಲಯತಯಾಽಹಂಮಮನುತ್ತೇಽತಿಧೈರ್ಯಂ
ಚಾತುರ್ಯಾದೀನಿ ನ್ಯಾಣಾಮಪಹರತಿ ಹರಿಸ್ತೇೕಕ್ಷಭಾಣೀಚ್ಛರಾದೀಃ ॥

(ಈ ಷಷ್ಠದಶಕದ ಸಾರಾಂಶ)—
ಈ ಆರನೆಯದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ, ಈ ನಾಯಕಿಯು ತನ್ನ ನಾಯಕನಿಗೋಸ್ಕರ ತನ್ನ ಕೈಬಳೆಯನ್ನೂ, ಶರೀರಕಾನ್ತಿಯನ್ನೂ, ಗೌರವಾತಿಶಯವನ್ನೂ, ಸುಶೀಲವನ್ನೂ, ಬುದ್ಧಿಕೌಶಲವನ್ನೂ, ಶರೀರವನ್ನೂ, ಲಾವಣ್ಯವನ್ನೂ, ಸೌನ್ದರ್ಯವನ್ನೂ, ಸುರೂಪವನ್ನೂ, ಮಾನವನ್ನೂ ತ್ಯಜಿಸಿ ಸೋತು, ಶಿಥಿಲೆಯಾಗಿವಾಳೆಂದು—ಈ ನಾಯಕಿಯ ತಾಯಿಯು ಹೇಳುವಂತೆ ವರ್ಣಿಸಿ ಇರುತ್ತಾರೆ.

——:※:——

ಶ್ರೀಃ

# ಷಷ್ಠಶತಕದಲ್ಲಿ—ಸಪ್ತಮದಶಕ.

(ಉಣ್ಣಾವ್ ಶೋಱು—)

(ಈ ದಶಕದಲ್ಲಿ— ಅತ್ಯನ್ತಮೋಹಾವಿಷ್ಟೆಯಾದ ಈ ನಾಯಕಿಯು ಮೋಹ
ಶಾನ್ತಿಯಂ ಪಡೆದು ತಿರುಕ್ಕೋಳೂರ್-ಎಂಬ ದಿವ್ಯಕ್ಷೇತ್ರದಲ್ಲಿ
ಹೋಗಿ ಅಲ್ಲಿಯೇ ನಾಯಕನಾದ ಸ್ವಾಮಿಯನ್ನು
ಆಶ್ರಯಿಸಿದಾಳೆಂದು ನಿಶ್ಚಯಿಸಿ ಇದನ್ನು
ತಾಯಿಯು ವರ್ಣಿಸುತ್ತಾಳೆ.)

———

(೧) ಉಣ್ಣಾವ್ ಶೋಱು ಪರುಕುನೀರ್ ತಿನ್ನುವ್
ವೆತ್ತಿಲೈಯುಮೆಲ್ಲಾವ್
ಕಣ್ಣನ್, ಎಮ್ಬೆರುಮಾನೆನ್ರೆನ್ರೇ ಕಣ್ಗಳ್ ನೀರ್ಮಲ್ಕಿ,
ಮಣ್ಣಿನುಳವನ್ಶೀರ್ ವಳಮ್ಮಿಕ್ಕವನೂರ್ ವಿನವಿ,
ತಿಣ್ಣಮೆನ್ನಿಳಮಾನ್ ಪುಕುಮೂರ್ ತಿರುಕ್ಕೋಳೂರೇ,

ಪ್ರ॥ ಉಣ್ಣುಮ್ ಶೋಱು-ಊಟಮಾಡಬೇಕಾದ ಅನ್ನವೂ, ಪರುಕುನೀರ್- ಕುಡಿಯಬೇಕಾದ ನೀರೂ, ತಿನ್ನುಮ್ ವೆಱ್ಱಿಲೈಯುಮ್ – ಬಾಯಲ್ಲಿ ಅಗಿಯ ಬೇಕಾದ ತಾಂಬೂಲವೂ, ಎಲ್ಲಾಮ್ – ಇವೆಲ್ಲವೂ, ಕಣ್ಣ-"ವಾಸುದೇವಸ ರ್ವಮ್" ಎಂಬಂತೆ ಶ್ರೀಕೃಷ್ಣರೂಪಿಯಾದ, ಎಮ್ ಪೆರುಮಾನ್-ನನ್ನ ಸ್ವಾಮಿಯ್ಯೆ ಎನ್ಱೆನ್ಱೇ-ಎಂದೇ ಅನೇಕಾವೃತ್ತಿ ಹೇಳಿ, ಕಣ್‌ಕಳ್ – ಕಣ್ಣುಗಳು, ನೀರ್‌ಕಳ್ ಮಲ್‌ಕಿ – ನೀರುತುಂಬಿ, ಮಣ್ಣಿನುಳ್ – ಭೂಮಿಯಲ್ಲಿ, ಅವ್ವಾಶೇರ್-ಅವತಾರ ಮಾಡಿದ ಅವನ ಕಲ್ಯಾಣಗುಣಗಳನ್ನೂ, ವಳಮ್‌ಮಿಕ್ಕವ್ವ-ಸ್ನೇಹಪೂರ್ಣನಾದ ಅವನ, ಊರ್‌ವಿನವಿ-ಊರನ್ನು ಪ್ರೀತಿಯಿಂದ ವಿಚಾರಿಸಿ, ಎನ್ ಇಳಮಾನ್–ನನ್ನ ಎಳೇ ಹುಲ್ಲೇಕರುವಿನಂತೆ ಇರುವ ಕನ್ಯೆಯು, ಪುಕುಮ್ ಊರ್-ಪ್ರವೇಶಿಸುವ ಊರು, ತಿರುಕ್ಕೋಳೂರೇ-ಶ್ರೀ ಕೋಳೂರುಪುರವೇ. ತಿಣ್ಣಮ್-ಇದು ಸತ್ಯ.

( ಸ-ಗಾ-ರ ॥ )—

ಭೋಜ್ಯಂ ಪೇಯಮಪೀಹ ಭಾತಿ ಕಿಲ ಮೇ ತಾಮ್ಬೂಲವೀಟೀ ಚ ಸ
ಶ್ರೀಕೃಷ್ಣಃ ಪ್ರಭುರೇವ ಸರ್ವಮಿತಿ ಯತ್ಪ್ರಾಶ್ರುಕ್ಷ್ತದೀಯಾನ್ ಗುಣಾನ್ |
ಭೂಮ್ಯಾಮತ್ರ ತು ತತ್ಪುರೀಂ ಚ ಕಥಯನ್ತ್ಯೇವ ಸ್ವಯಂ ಮೇ ಸುತಾ
ಶ್ರೀಕೋಳೂರಿತಿ ತತ್ಪುರಂ ಸುವಿದಿತಂ ನೂನಂ ಪ್ರವಿಷ್ಟಾಽಧುನಾ ॥

ತಾ॥ ಭೋಜ್ಯವಾದ ಅನ್ನವೂ, ಪೇಯವಾದ ಜಲವೂ, ಅಗಿಯಬೇಕಾದ ತಾಂಬೂಲವೂ—ಸರ್ವವೂ ಶ್ರೀಕೃಷ್ಣನೇ (ನನ್ನ ಸ್ವಾಮಿಯೇ) ಎಂದು ಅನೇಕಾ ವೃತ್ತಿ ಹೇಳಿ, ಕಣ್ಣುಗಳಲ್ಲಿ ನೀರುತುಂಬಿಕೊಂಡು, ಭೂಮಿಯಲ್ಲಿ ಅವತರಿಸಿದ ಅವನ ಕಲ್ಯಾಣಗುಣಗಳನ್ನೂ ಅವನ ಊರನ್ನೂ ಕೀರ್ತನಮಾಡಿ ವಿಚಾರಿಸುತ್ತ, ಈ ತರುಣಹರಿಣೀಸದೃಶೆಯಾದ ನನ್ನ ಕನ್ಯೆಯು ಪ್ರವೇಶಿಸುವ ಊರು ತಿರುಕ್ಕೋ ಳೂರೇ. (ಇದು ನಿಶ್ಚಯ.)

(೨) ಊರುಮ್ ನಾಡುಮುಲಕಮುಮ್
ತನ್ನೈಪ್ಪೋಲವನುಡೈಯ
ಪೇರುಮ್ ತಾರ್‌ಕಳುಮೇ ಪಿದಱ್ಱ ಕ್ಕೆಡುತ್ತ ವಾನಿಡಣಿ,
ಶೇರುಮ್ ನಲ್‌ವಳಮ್‌ಶೇರ್ ಪಱನ ತ್ತಿರುಕ್ಕೋಳೂರ್‌ಕ್ಕೇ
ಪೋರುಙ್ಗೊಲುರೈಯಾರ್ ಕೊಡಿಯೇನ್‌ಕೊಡಿ
ಪೂವೈಕಳೇ.

ಪ್ರ॥ ಊರುಮ್ – (ತಾನು ವಾಸಮಾಡುವ) ಗ್ರಾಮವೂ, ನಾಡುಮ್– ದೇಶವೂ, ಉಲಕಮುಮ್–ಲೋಕವೂ, ತನ್ನೈಪ್ಪೋಲ್–ತನ್ನಂತೆಯೇ, ಅವನುಡೈಯ–ಅವನ, ಪೇರುಮ್ – ನಾಮಧೇಯಗಳನ್ನೂ, ತಾರ್‌ಕಳುಮೇ–ಮಾಲಿಕೆಗಳನ್ನೂ (ಹಾರಗಳನ್ನೂ), ಪಿದಱ್ಱ – ಸ್ತುತಿಸುವಂತೆ, ವಾ – ಆಕಾಶದಂತೆ ಅತಿ ವಿಸ್ತೀರ್ಣವಾದ, ಕೞ್ವು – ಸ್ತ್ರೀತ್ವಮರ್‍ಯಾದೆಯನ್ನು, ಇಡಱ್ಱ-ಅತಿಕ್ರಮಿಸಿ, ನಲ್‌ವಳಮ್ – ವಿಲಕ್ಷಣವಾದ ಸಮೃದ್ಧಿಯೊಡನೆ, ಶೇರ್–ಸೇರಿದ, ಪೞನ–ಸಸ್ಯಕ್ಷೇತ್ರಗಳುಳ್ಳ, ತಿರುಕ್ಕೋಳೂರ್‌ಕ್ಕೇ – ತಿರುಕ್ಕೋಳೂರಿಗೇ, ಶೇರುಮ್–ಹೋಗಿ ಸೇರುವವಳಾದ, ಕೊಡಿಯೇಱ ಕೊಡಿ-ಅತಿ ಕಠಿನಹೃದಯೆಯಾದ ನನ್ನ ಈ ಲತಾಂಗಿಯಾದ ಕನ್ಯೆಯು, ಪೋರುಮ್ಕೊಲ್–ಪುನಃ ಬರುವಳೇ?, ಪೂವೈಕಳೇ–ಪೂವೈ ಯೆಂಬ ಪಕ್ಷಿಗಳೇ!, ಉರೈಯೀರ್–(ನೀವು) ಹೇಳಿರಿ. (ನಿಮಗೆ ತಿಳಿದಿರಬಹುದಷ್ಟೆ!)

( ಸ–ಗಾ–ರ ॥ )—

ತನ್ನಾಮಾನಿ ಚ ತತ್ಸ್ರಜೋಽಪಿಚ ಭುವಿ ಗ್ರಾಮೋಽಸ್ಯ ದೇಶಾಸ್ತ್ವಯಂ
ಲೋಕಾಶ್ಚಾಪ್ಯಖಿಲಾ ಬ್ರುವನ್ತಿ ಕಿಲ ಸ್ತ್ರೀತ್ವಂ ತ್ಯಜನ್ತೀ ನಿಜಮ್ ।
ಶ್ರೀಕೋಳೂರಿತಿ ತತ್ಪುರಂ ಮಮ ಸುತಾ ಸಸ್ಯಾದಿಪೂರ್ಣಂ ಗತಾ
ಕಿಂ ವಾಽಽಯಾತಿ ಪುನಶ್ಚ ಹನ್ತ! ವದತ ಪ್ರೇಷ್ಠಾಶ್ಚ ತತ್ಪಕ್ಷಿಣಃ! ॥

ತಾ॥ ತಾನು ವಾಸಮಾಡುವ ಗ್ರಾಮವೂ, ದೇಶವೂ, ಲೋಕವೂ –ಎಲ್ಲವೂ ತನ್ನಂತೆಯೇ ಅವನ ನಾಮಧೇಯಗಳನ್ನೂ ಮಾಲಿಕಾದಿ ಚಿಹ್ನಗಳನ್ನೂ ಸ್ತುತಿಸುವಂತೆ, ತನ್ನ ಸ್ತ್ರೀತ್ವ ಮರ್‍ಯಾದೆಯನ್ನು ಅತಿಕ್ರಮಿಸಿ, ಸಮೃದ್ಧ ಸಸ್ಯಕ್ಷೇತ್ರಭರಿತವಾದ ತಿರುಕ್ಕೋಳೂರಿಗೇ ಹೋಗಿ ಸೇರುವವಳಾದ ನನ್ನ ಈ ಲತಾಂಗಿಯಾದ ಕನ್ಯೆಯು ಪುನಃ ಬರುವಳೇ? ಅವಳಿಗೆ ಪ್ರಿಯವಾದ ಪೂವೈಪಕ್ಷಿಗಳೇ! ನೀವು ಹೇಳಿರಿ. (ನಿಮಗೆ ತಿಳಿದಿರಬಹುದಷ್ಟೆ!)

(೩) ಪೂವೈ ಪೈಙ್ಕಿಳಿಕಳ್ ಪನ್ದು ತೂದೈ ಪೂಮ್‌ಪುಟ್ಟಿಲ್‌ಕಳ್,
ಯಾವೈಯುಮ್ ತಿರುಮಾಲ್ ತಿರುನಾಮಙ್ಗಳೇ
ಕೂವಿಯೆೞುಮ್, ಎನ್
ಪಾವೈಪೋಯಿನಿ ತ್ತಣ್ ಪೞನ ತ್ತಿರುಕ್ಕೋಳೂರ್‌ಕ್ಕೇ,
ಕೋವೈವಾಯ್‌ತುಡಿಪ್ಪ ಮೞೈಕ್ಕಣ್ಣೊಡೆನ್ ಶೆಯ್ಯುಙ್ಕೊಲೋ.

ಪ್ರ॥ ಪೂವೈ-ಪೂವೈ ಪಕ್ಷಿಗಳೂ, ಪೈಙ್ಕಿಳಿಕಳ್-ಹಸುರುಬಣ್ಣವುಳ್ಳ ಗಿಣಿಗಳೂ, ಪನ್ದು-ಚೆಂಡು, ತೂದೈ-ಆಟದ ಸಾಮಾನು, ಪೂಮ್‌ಪುಟ್ಟಿಲ್‌ಕಳ್ - ಹೂವಿನ ಬುಟ್ಟಿಗಳೂ, ಯಾವೈಯುಮ್ - ಎಲ್ಲವೂ, ತಿರುಮಾಲ್ - ಶ್ರಿಯಃಪತಿಯಾದ ಸ್ವಾಮಿಯ, ತಿರುನಾಮಙ್ಗಳೇ-ನಾಮಧೇಯಗಳೇ, (ಎಂದು ಅವುಗಳನ್ನು) ಕೂವಿ-ಕೂಗಿ (ಆ ನಾಮಧೇಯಗಳಿಂದಲೇ ಕೂಗಿ), ಏೞುಮ್ - ಉಜ್ಜೀವಿಸುವ, ಎನ್-ನನ್ನ, ಪಾವೈ-ಮಗಳು, ಇನಿ-ಇನ್ನುಮೇಲೆ, ತಣ್‌ಪೞನ-ಶೀತಳವಾದ (ಜಲಭರಿತವಾದ) ಸಸ್ಯಕ್ಷೇತ್ರಗಳುಳ್ಳ, ತಿರುಕ್ಕೋಳೂರ್‌ಕ್ಕೇ - ತಿರುಕ್ಕೋಳೂರಿಗೇ, ಪೋಯ್-ಹೋಗಿ, ಕೋವೈವಾಯ್- ಬಿಂಬಫಲದಂತೆ ಇರುವ ಅಧರವು, ತುಡಿಪ್ಪ-(ವಿರಹ (ವ್ಯಸನದಿಂದ) ಚಲಿಸಲು, ಮೞೈಕ್ಕಣ್ಣೊಡು - ಮಳೆಯಂತೆ ನೀರುಹರಿಯುವ ಕಣ್ಣುಗಳೊಡನೆ, ಎನ್ಶೆಯ್ಯುಙ್ಗೊಲೋ - ಏನು ಮಾಡುವಳೋ?

( ಸ-ಗಾ-ರ ॥ )—

ನಾನಾಪಕ್ಷಿಗಣಾಶ್ಶುಕಾದಯ ಇಮೇ ಲೀಲಾರ್ಥಕಾಃ ಕನ್ದುಕಾಃ
ಪುಷ್ಪಾದ್ಯಾಶ್ರಯಭಾಜನಾನಿ ಸಕಲಂ ಶ್ರೀಶಸ್ಯ ನಾಮಾನಿ ಹಿ ।
ಏವಂ ಕೀರ್ತನತತ್ಪರಾ ಮಮ ಸುತಾ ಗತ್ವಾ ಪುರೀಂ ಪಾವನೀಂ
ಶ್ರೀಕೋಳೂರಿತಿ ತಾಂ ಕಿಲಾಶ್ರುಭರಿತಾ ಸ್ಯಾತ್! ಕಿನ್ನು ಕುರ್ಯಾದಹೋ॥

ತಾ॥ ಪೂವೈಪಕ್ಷಿಗಳೂ, ಹಸುರಾದ ಗಿಣಿಗಳೂ, ಚೆಂಡು ಮೊದಲಾದ ಆಟದ ಸಾಮಾನುಗಳೂ, ಹೂವಿನಬುಟ್ಟಿಗಳೂ— ಎಲ್ಲವೂ ಶ್ರಿಯಃಪತಿಯಾದ ಸ್ವಾಮಿಯ ನಾಮಧೇಯಗಳೇ ಎಂದು ಅವುಗಳನ್ನು ಆ ನಾಮಧೇಯಗಳಿಂದ ಕೂಗಿ, ಉಜ್ಜೀವಿಸುವ ನನ್ನ ಕನ್ಯೆಯು ಇನ್ನುಮೇಲೆ ಸಮೃದ್ಧಸಸ್ಯಕ್ಷೇತ್ರಭರಿತವಾದ ತಿರುಕ್ಕೋಳೂರಿಗೇ ಹೋಗಿ, ಅವಳ ಬಿಂಬಾಧರವು (ವಿರಹವ್ಯಸನದಿಂದ) ಚಲಿಸುವಂತೆ ವರ್ಷಧಾರಾರೂಪವಾದ ಕಣ್ಣುನೀರಿನೊಡನೆ ಅಲ್ಲಿ ಏನುಮಾಡುವಳೋ ?

(೪) ಕೊಲ್ಲೈ ಯೆನ್ಬರ್‌ಕೊಲೋ
ಕುಣಮ್‌ಮಿಕ್ಕನಳೆನ್ಬರ್‌ಕೊಲೋ,
ಶಿಲ್ಲೈವಾಯ್ ಪ್ಪೆಣ್ಡುಕಳೆಯಲ್ಶೇರಿ ಯುಳ್ಳಾರುಮೆಲ್ಲೇ,
ಶೆಲ್ವಮ್‌ಮಲ್‌ಕಿ ಯವನ್ ಕಿಡನ್ದ ತಿರುಕ್ಕೋಳೂರ್‌ಕ್ಕೇ,
ಮೆಲ್ಲಿಡೈನುಡಙ್ಗವಿಳಮಾನ್ ಶೆಲ್ಲಮೇವಿನಳೇ.

ಪ್ರ॥ ಶೆಲ್ವಮ್‌ಮಲ್‌ಕಿ-ಸಮ್ಪತ್ಸಮೃದ್ಧಿಯೊಡನೆ, ಅವ‌ನ್-ಅವನು, ಕಿಡನ್ದ-ಶಯನಮಾಡಿರುವ, ತಿರುಕ್ಕೋಳೂರ್‌ಕ್ಕೇ-ತಿರುಕ್ಕೋಳೂರಿಗೇ, ಮೆಲ್ಲಿಡೈ-ಕೃಶವಾದ ಮಧ್ಯವು, ನುಡಜ್ಗ-ಬಗ್ಗಿಹೋಗುವಂತೆ ಇರುವ, ಇಳಮಾ‌ನ್-ಎಳೇ ಹುಲ್ಲೇಕರುವಿಗೆ ಸಮಾನೆಯಾದ ಇವಳು, ಶೆಲ್ಲ ಮೇವಿನಳ್-ಹೋಗಲು ಸಮ್ಮತಿಸಿ ಹೋದಳು. ಶಿಲ್ಲೈವಾಯ್ - ದೂಷಣವೇ ಸ್ವಭಾವವಾದ ಬಾಯಿಯುಳ್ಳ, ಪೆಣ್ಡುಕಳ್ - ಸ್ತ್ರೀಯರೂ, ಅಯಲ್ತ್ತೇರಿ ಉಳ್ಳಾರುಮ್-ಪಕ್ಕದಬೀದಿಯಲ್ಲಿರುವವರೂ, ಕೊಲ್ಲೈ-(ಇವಳು) ಎಲ್ಲೆಯನ್ನು ಮೀರಿಹೋದವಳು, ಎನ್ಬರ್‌ಕೊಲೋ-ಎಂದು ದೂಷಿಸುವರೋ ? ಕುಣಮ್ ಮಿಕ್ಕನಳ್ - ಗುಣಾತಿಶಯವುಳ್ಳವಳು, ಎನ್ಬರ್‌ಕೊಲೋ-ಎಂದು ಸ್ತೋತ್ರಮಾಡುವರೋ ? ಎಲ್ಲೇ-ಅಯ್ಯೋ ! ಇದೇನಾಗುವುದೋ ? (ಎಂದು ತಾಯಿಯು ಚಿನ್ತಾಕ್ರಾನ್ತೆಯಾಗಿದಾಳೆ.)

( ಸ-ಗಾ-ರ ॥ )—

ಶ್ರೀಕೋಳೂರಿತಿ ತಾಂ ಪುರೀಂ ಮುರರಿಪೋಸ್ಸಮ್ಪತ್ಸಮೃದ್ಧ್ಯಾಮಿಯಂ
ಪುತ್ರೀ ಮೇ ಸುಕುಮಾರಮುಗ್ಧಹರಿಣೀ ಗನ್ತುಂ ಹಿ ಸಕ್ತಾಽಭವತ್ ।
ಕಿಂ ನಿನ್ದನ್ತಿ ಪುರಸ್ತ್ರಿಯಶ್ಚ ಪರಿತಸ್ಸೀಯಸ್ತು ವೇಲಾತಿಗೇ -
ತ್ಯಾಹೋಸ್ವಿತ್ಪ್ರತ ಸದ್ಗುಣೇತಿ ನಿತರಾಂ ಶಂಸನ್ತಿ ಜಲ್ಪಪ್ರಿಯಾಃ ॥

ತಾ॥ ಸಮ್ಪತ್ಸಮೃದ್ಧಿಯೊಡನೆ ಅವನು ಶಯನಮಾಡಿರುವ ತಿರುಕ್ಕೋಳೂರಿಗೇ ನನ್ನ ಕೃಶಮಧ್ಯೆಯಾದ ಕನ್ಯೆಯು ಹೋಗಲು ಸಮ್ಮತಿಸಿ ಹೋಗಿದಾಳೆ. ದೂಷಿಸುವ ಸ್ವಭಾವವುಳ್ಳ ಸ್ತ್ರೀಯರೂ ಪಕ್ಕದ ಬೀದಿಯಲ್ಲಿ ವಾಸವಾಗಿರುವವರೂ ಇವಳು ಎಲ್ಲೆಯನ್ನು ಮೀರಿಹೋದವಳು ಎಂದು ನಿಂದಿಸುವರೋ, ಅಥವಾ ಇವಳು ಗುಣಾತಿಶಯವುಳ್ಳವಳೆಂದು ಶ್ಲಾಘಿಸುವರೋ ? ಅಯ್ಯೋ ! ಇದೇನಾಗುವುದೋ ? (ಎಂದು ತಾಯಿಯು ಚಿನ್ತಾಕ್ರಾನ್ತೆಯಾಗುತ್ತಾಳೆ).

(೫) ಮೇವಿ ನ್ನೈಸ್ಸುನ್ನೈನ್ದು ವಿಳೈಯಾಡಲುರಾಳ್‌ಎನ್ ಶೆಯ್
ತ್ತೇವಿ ಪೋಯಿನಿ ತ್ತಾನ್‌ತಿರುಮಾಲ್ ತಿರುಕ್ಕೋಳೂರಿಲ್,
ಪೂವಿಯಲ್ ಪೊಳಿಲುಮ್ ತಡಮುಮವನ್
ಕೋಯಿಲುಮ್ ಕಣ್ಡು,
ಆವಿಯುಳ್ ಕುಳಿರ ಯೆಜ್ಙನೇ ಯುಕಕ್ಕುಜ್ಕೊಲಿನ್ಱೇ.

ಪ್ರ॥ ಮೇವಿ-(ಅವನ ಸೌನ್ದರ್ಯಾದಿಗಳನ್ನು) ಮನಸ್ಸಿನಲ್ಲಿ ಭಾವಿಸಿ, ನೈನು ನೈನ್ದು-ಪ್ರತಿಕ್ಷಣವೂ ಅತ್ಯನ್ತ ಶಿಥಿಲೆಯಾಗಿ, ವಿಳೈಯಾಡಲ್ ಉಱಾಳ್-ಆಟವಾಡು ವುದರಲ್ಲೂ ಮನಸ್ಸಿಲ್ಲದವಳಾಗಿರುವ, ಎನ್‌ಶಿಱುತ್ತೇವಿ-ನನ್ನ ಚಿಕ್ಕವಯಸ್ಸಿನ ಮಹಾಬುದ್ಧಿಶಾಲಿಯಾದ ಕನ್ಯೆಯು, ಪೋಯ್-ಹೋಗಿ, ತನ್ ತಿರುಮಾಲ್-ತನ್ನ ಶ್ರಿಯಃಪತಿಯಾದ ಸ್ವಾಮಿಯ, ತಿರುಕ್ಕೋಳೂರಿಲ್-ತಿರುಕ್ಕೋಳೂರಿನಲ್ಲಿ, ಪೂ ಇಯಲ್ ಪೊಳಿಲುಮ್-ಪುಷ್ಪಸಮೃದ್ಧಿಯುಳ್ಳ ಉದ್ಯಾನಗಳನ್ನೂ, ತಡಮುಮ್-ತಟಾಕಗಳನ್ನೂ, ಅವನ್ ಕೋಯಿಲುಮ್-ಅವನ ದೇವಾಲಯವನ್ನೂ, ಇನಿ ಕಣ್ಡು-ಈಗ ಕಂಡಮೇಲೆ, ಆವಿ ಉಳ್‌ಕುಳಿರ-ಪ್ರಾಣಾಶ್ರಯವಾದ ಹೃದಯವು ತಣ್ಣಗೆ ಇರುವಂತೆ, ಇನ್ಱು-ಈದಿನ, ಎಙ್ಙನೇ-ಹೇಗೆ, ಉಕಕ್ಕುಙ್ಕೊಲ್-ಸನ್ತೋಷಪಡುತ್ತಿದ್ದಾಳೋ!

( ಸ-ಗಾ-ರ ॥ )—

ಶೈಥಿಲ್ಯಾನ್ಮನಸಸ್ಸ್ವಯನ್ತು ಚಪಲಾ ಸೇಯಂ ಸುತಾ ಮೇಽದ್ಯ ತಾಂ
ಶ್ರೀಕೋಳೂರುಪುರೀಂ ಗತ್ವೈವ ಸಕಲಾಂ ಲೀಲಾಂ ತ್ಯಜನ್ತೀ ನಿಜಾಮ್ ।
ತತ್ರತ್ಯಾನಿ ಸರಾಂಸಿ ಸಸ್ಯಭರಿತಾಂ ಕ್ಷೇತ್ರಾವಳೀಂ ಶ್ರೀಪತೇ-
ರ್ದೇವಾಗಾರಮಿಯಂ ವಿಲೋಕ್ಯ ಮುದಿತಾ ಭೂಯಾತ್ಕಿಲಾದ್ಯ ಸ್ವಯಮ್॥

ತಾ॥ ಅವನ ಸೌನ್ದರ್ಯಾದಿಗಳನ್ನು ಮನಸ್ಸಿನಲ್ಲಿ ಭಾವಿಸಿ ಅತ್ಯನ್ತಶಿಥಿಲೆಯಾಗಿ, ಆಟದಲ್ಲೂ ಮನಸ್ಸಿಲ್ಲದವಳಾಗಿರುವ ನನ್ನ ಚಿಕ್ಕವಯಸ್ಸಿನ ಅತಿಬುದ್ಧಿಶಾಲಿಯಾದ ಕನ್ಯೆಯು ಹೋಗಿ ತನ್ನ ಸ್ವಾಮಿಯ ತಿರುಕ್ಕೋಳೂರಿನಲ್ಲಿರುವ ಪುಷ್ಪೋದ್ಯಾನಗಳನ್ನೂ ತಟಾಕಗಳನ್ನೂ ಅವನ ದೇವಾಲಯವನ್ನೂ ಕಂಡು ತನ್ನ ಅನ್ತರಂಗದಲ್ಲಿ ಎಷ್ಟು ಸನ್ತೋಷಪಡುತ್ತಿದ್ದಾಳೋ!

(೬) ಇನ್ಱೆನಕ್ಕುದವಾದಕನ್ಱ ಇಳಮಾನಿನಿ ಪೋಯ್,
ತೆನ್‌ತಿಶೈ ತ್ತಿಲದಮನ್ನೈಯ ತಿರುಕ್ಕೋಳೂರ್‌ಕ್ಕೇ,
ಶೆನ್ಱು ತನ್‌ತಿರುಮಾಲ್ ತಿರುಕ್ಕಣ್ಣಾನ್ ಶೆವ್ವಾಯುಮ್ ಕಣ್ಡು,
ನಿನ್ಱುನಿನ್ಱು ನೈಯುಮ್, ನೆಡುಙ್ಕಣ್‌ಕಳ್ ಪನಿಮಲ್‌ಕವೇ.

ಪ್ರ॥ ಎನಕ್ಕು-ನನಗೆ, ಇನ್ಱು-ಈಗ, ಉದವಾದು-ವಶವಾಗದೆ, ಅಕನ್ಱ-(ನನ್ನನ್ನು) ಬಿಟ್ಟುಹೋದ, ಇಳಮಾನ್-ಎಳೇ ಹುಲ್ಲೇಕರುವಿಗೆ ಸದೃಶಿಯಾದ ಕನ್ಯೆಯು, ಪೋಯ್-ಹೋಗಿ, ತೆನ್‌ತಿಶೈ-ದಕ್ಷಿಣದಿಕ್ಕಿಗೆ, ತಿಲದಮನ್ನೈಯ-ತಿಲಕ

ದಂತೆ ಅಲಂಕಾರವಾದ, ತಿರುಕ್ಕೋಳೂರ್ಕ್ಕೇ – ತಿರುಕ್ಕೋಳೂರಿಗೇ, ಶೆನ್ಱು–ಹೋಗಿ ಪ್ರವೇಶಿಸಿ, ಇನಿ–ಇನ್ನುಮೇಲೆ, ತನ್ ತಿರುಮಾಲ್–ತನ್ನ ಶ್ರಿಯಃಪತಿಯಾದ ಸ್ವಾಮಿಯ, ತಿರುಕ್ಕಣ್ಣುಮ್ – ದಿವ್ಯನೇತ್ರಗಳನ್ನೂ, ಶೆವ್ವಾಯುಮ್–ಬಿಂಬಾಧರವನ್ನೂ, ಕಣ್ಡು–ಕಂಡು, ನೆಡುಮ್ ಕಣ್‌ಕಳ್–ವಿಶಾಲವಾದ (ಇವಳ) ನೇತ್ರಗಳು, ಪನಿಮಲ್ಕವೇ–ಆನನ್ದಬಾಷ್ಪಭರಿತವಾಗುವಂತೆ, ನಿನ್ಱು ನಿನ್ಱು–ಅಲ್ಲಲ್ಲಿ ನಿಂತು ನಿಂತು, ನೈಯುಮ್–ಶಿಥಿಲೆಯಾಗುತ್ತಿದ್ದಾಳಲ್ಲವೇ !

( ಶ–ಗಾ–ರ || )—

ವಿಶ್ಲಿಷ್ಟಾ ಚ ಸುತಾ ಮಮಾದ್ಯ ಹರಿಣೀ ಮುಗ್ಧಾ ತು ಗತ್ವಾ ಪುರೀಂ
ಶ್ರೀಕೋಳೂರಿತಿ ತಾಮವಾಚ್ಯತಿಲಕಪ್ರಾಯಾಂ ಶುಭಾಂ ಶ್ರೀಪತೇಃ ।
ದೃಷ್ಟ್ವಾತ್ರ ದಿವ್ಯವಿಲೋಚನದ್ವಯಮಿಯಂ ಬಿಮ್ಬಾಧರಂ ಚ ಸ್ವಯಂ
ಬಾಷ್ಪಾರ್ದ್ರಯುತಲೋಚನಾ ಪ್ರತಿಕಲಂ ಸಮ್ಮೋಹಿತಾ ಸ್ಯಾದಹೋ ! ||

ತಾ॥ ನನಗೆ ವಶವಾಗದೆ ನನ್ನನ್ನು ಬಿಟ್ಟುಹೋದ ಹರಿಣೀಶಿಶು ಸದೃಶೆಯಾದ ನನ್ನ ಕನ್ಯೆಯು ದಕ್ಷಿಣದಿಕ್ಕಿಗೆ ಅಲಂಕಾರವಾದ ತಿರುಕ್ಕೋಳೂರಿಗೇ ಹೋಗಿ ಪ್ರವೇಶಿಸಿ, ತನ್ನ ಸ್ವಾಮಿಯಾದ ಶ್ರಿಯಃಪತಿಯ ದಿವ್ಯನೇತ್ರಗಳನ್ನೂ ಬಿಂಬಾಧರವನ್ನೂ ಕಂಡು, ಆನನ್ದಬಾಷ್ಪಗಳುಳ್ಳವಳಾಗಿ, ನಿಂತು ನಿಂತು ಅತ್ಯನ್ತ ಶಿಥಿಲೆಯಾಗುತ್ತಿದ್ದಾಳಲ್ಲವೇ !

(೭) ಮಲ್ಕುನೀರ್ ಕಣ್ಣೊಡು ಮೈಯಲುಱ್ಱ
ಮನತ್ತನಳಾಯ್,
ಅಲ್ಲುಮ್ ನನ್ ಪಕಲುಮ್ ನೆಡುಮಾಲೆನ್ಱಳೈತ್ತಿನಿಪ್ಪೋಯ್,
ಶೆಲ್ವಮ್ ಮಲ್ಕಿ ಯವನ್ ಕಿಡನ್ದ ತಿರುಕ್ಕೋಳೂರ್ಕ್ಕೇ,
ಒಲ್ಕಿಯೊಲ್ಕಿ ನಡನ್ದೆಙ್ಙನೇ ಪುಕುಙ್ಕೊಲೊಶಿನ್ದೇ.

ಪ್ರ॥ ಮಲ್ಕುನೀರ್–(ವಿರಹದಿಂದ) ಅಧಿಕವಾದ ನೀರುಳ್ಳ, ಕಣ್ಣೊಡು–ಕಣ್ಣುಗಳೊಡನೆ, ಮೈಯಲ್–ಭ್ರಮವನ್ನು, ಉಱ್ಱ–ಹೊಂದಿರುವ, ಮನತ್ತನಳಾಯ್–ಮನಸ್ಸುಳ್ಳವಳಾಗಿ, ನನ್–ಒಳ್ಳೇ, ಅಲ್ಲುಮ್ ಪಕಲುಮ್–ರಾತ್ರಿಯೂ ಹಗಲೂ, ನೆಡುಮಾಲ್ – ಅತ್ಯನ್ತ ವ್ಯಾಮೋಹವುಳ್ಳವನೇ !, ಎನ್ಱು–ಎಂದು, ಅೞೈತ್ತು–ಕೂಗಿ, ಇನಿ ಒಲ್ಕಿ ಒಲ್ಕಿ–ಆದರಮೇಲೆ ಅಲ್ಲಲ್ಲಿ ಮರೆಸಿಕೊಂಡು

ಚಲಿಸುತ್ತ, ನಡನ್ದು–ನಡೆದು, ಒಶಿನ್ದು–ಶ್ರಾನ್ತೆಯಾಗಿ, ಪೋಯ್–ಹೋಗಿ, ಶೆಲ್ವಮ್ ಮಲ್ಕಿ–ಐಶ್ವರ್ಯಪರಿಪೂರ್ಣನಾಗಿ, ಅರ್ವ‌ಕಿಡನ್ದ–ಅವನು ಶಯನಮಾಡಿರುವ, ತಿರುಕ್ಕೋಳೂರ್‌ಕ್ಕೇ–ತಿರುಕ್ಕೋಳೂರಿಗೇ, ಎಙ್ಙನೇ–ಹೇಗೆ, ಪುಕುಙ್ಕೊಲ್–ಪ್ರವೇಶಿಸುವಳೋ !

( ಶ–ಗಾ–ರ ॥ )—

ಸೇಯಂ ಸಾಶ್ರುವಿಲೋಚನಾ ಭ್ರಮವಶಾ ಚಿತ್ತೇ ಚ ನಕ್ತನ್ದಿವಂ
ಶ್ರೀಶೇತ್ಯಾಹ್ವಯತಿ ಸ್ವಯಂ ಚ ಚಲತಿ ಶ್ರಾನ್ತಾऽದ್ಯ ಸಮ್ಪದ್ಯುತಾಮ್ ।
ಶ್ರೀಕೋಳೂರಿತಿ ತಾಂ ಪುರೀಂ! ಕಥಮಹೋ! ವಿಷ್ಣೋರಿಯಂ
ಪ್ರಾಪ್ನುಯಾತ್
ಕಾನ್ತಂ ತಂ ಪ್ರತಿ ಮೋಹಿತಾ ಮಮ ಸುತಾ ತಸ್ಮಿನ್ ಶಯಾನಂ ಪುರೇ ॥

ತಾ॥ ಕಣ್ಣುನೀರು ತುಂಬಿದವಳಾಗಿ ಭ್ರಮವಶ್ಯೆಯಾಗಿ ಇವಳು ರಾತ್ರಿಯೂ ಹಗಲೂ ಅವನನ್ನೇ ಸ್ಮರಿಸಿ ಕೂಗುತ್ತ, ಅಲ್ಲಲ್ಲಿ ಚಲಿಸುತ್ತ ಶ್ರಾನ್ತೆಯಾಗಿ ನಡೆದು ಹೋಗಿ, ಅವನು ಶಯನಮಾಡುವ ತಿರುಕ್ಕೋಳೂರಿಗೆ ಹೇಗೆ ಪ್ರವೇಶಿಸುವಳೋ !

(೮) ಒಶಿನ್ದ ನುಣ್ಣಿಡೈಮೇಲ್ ಕೈಯ್ಯೈವೈತ್ತು ನೊನ್ದುನೊನ್ದು,
ಕಶಿನ್ದನೆಞ್ಜಿನಳಾಯ್ ಕ್ಕಣ್ಣನೀರ್‌ತುಳುಮ್ಬ
ಚ್ಚೆಲ್ಲುಙ್ಕೊಲ್,
ಒಶಿನ್ದವೊಣ್‌ಮಲರಾಳ್ ಕೊೞುನನ್ ತಿರುಕ್ಕೋಳೂರ್‌ಕ್ಕೇ,
ಕಶಿನ್ದನೆಞ್ಜಿನಳಾಯೆಮ್ಮೈ ನೀತ್ತು ಎಮ್ ಕಾರಿಕೈಯೇ.

ಪ್ರ॥ ಒಶಿನ್ದ–(ಭೋಗರಸ ಮದದಿಂದ) ಚಲಿಸುವ, ಒಣ್‌ಮಲರಾಳ್–ಶ್ಲಾಘ್ಯಪದ್ಮವಾಸಿನಿಯಾದ ಲಕ್ಷ್ಮೀದೇವಿಗೆ, ಕೊೞುನನ್–ಪತಿಯಾದ ಸ್ವಾಮಿಯ, ತಿರುಕ್ಕೋಳೂರ್‌ಕ್ಕೇ–ತಿರುಕ್ಕೋಳೂರಿಗೇ, ಕಶಿನ್ದನೆಞ್ಜಿನಳಾಯ್–ಆರ್ದ್ರಚಿತ್ತೆಯಾಗಿ, ಎಮ್ಮೈನೀತ್ತು – ನಮ್ಮನ್ನು ಬಿಟ್ಟುಹೋದ, ಎಮ್ ಕಾರಿಕೈಯೇ–ನನ್ನ ಸುಕುಮಾರಿಯಾದ ಕನ್ಯೆಯು, ಒಶಿನ್ದ – ಬಗ್ಗಿಹೋದ, ನುಣ್ ಇಡೈಮೇಲ್–ಕೃಶವಾದ ಮಧ್ಯದಮೇಲೆ, ಕೈಯ್ಯೈವೈತ್ತು–ಕೈಯನ್ನು ಇಟ್ಟು, ನೊನ್ದುನೊನ್ದು–ಅತ್ಯನ್ತಖಿನ್ನೆಯಾಗಿ, ಕಶಿನ್ದನೆಞ್ಜಿನಳಾಯ್–ದ್ರವೀಭೂತವಾದ ಮನಸ್ಸುಳ್ಳವಳಾಗಿ, ಕಣ್ಣನೀರ್‌ತುಳುಮ್ಬ–ಕಣ್ಣುಗಳಲ್ಲಿ ನೀರುತುಂಬಿಕೊಂಡು, ಶೆಲ್ಲುಙ್ಕೊಲ್–(ಆ ಊರಿಗೆ) ಹೋಗಿ ಸೇರುವಳೋ ?

( ಸ-ಗಾ-ರ || )—

ಪದ್ಮಾಯಾಃ ಪ್ರಿಯವಲ್ಲಭಸ್ಯ ತು ಹರೇಶ್ಶ್ರೀಶಸ್ಯ ವಿಷ್ಣೋಃ ಪುರೀಂ
ಶ್ರೀಕೋಳೂರಿತಿ ತಾಂ ವಿಶೇತ್ಕಿಮು ಸುತಾ ಮೇ ಭ್ರಾನ್ತಿವಶಾತ್ ಸ್ವಯಮ್ |
ಮಾಂ ತ್ಯಕ್ತ್ವಾಽದ್ಯ ಮಹಾರ್ತಿಖಿನ್ನಹೃದಯಾ ಶ್ರಾನ್ತಾ ಸ್ವಹಸ್ತಂ ಕಟಿ-
ಸ್ಥಾನೇ ಹನ್ತ! ನಿವೇಶ್ಯ ಬಾಷ್ಪಭರಿತಸ್ವಾಕ್ಷಿದ್ವಯಾ ಭಾಮಿನೀ ||

ತಾ|| ಲಕ್ಷ್ಮೀಪತಿಯಾದ ಸ್ವಾಮಿಯ ತಿರುಕ್ಕೋಳೂರಿಗೇ ಆರ್ದ್ರಚಿತ್ತೆಯಾಗಿ ನಮ್ಮನ್ನು ಬಿಟ್ಟುಹೋದ ನನ್ನ ಸುಕುಮಾರಿಯಾದ ಕನ್ಯೆಯು ಕೃಶವಾದ ತನ್ನ ಮಧ್ಯದಲ್ಲಿ ಕೈಯಿಟ್ಟು, ಅತ್ಯನ್ತ ಖಿನ್ನೆಯಾಗಿ, ಸಾಶ್ರುನೇತ್ರೆಯಾಗಿ ಆ ಊರಿಗೆ ಹೋಗಿ ಸೇರುವಳೋ ? ಹೇಗೋ ?

(೯) ಕಾರಿಯುಮ್ ನಲ್ಲನಕಳನ್ನೈ ಕಾಣಿಲೆ಼ ಕಣ್ಣನುಕ್ಕೆನ್ಱು,
ಈರಿಯಾಯಿರುಪ್ಪಾಳಿದೆಲ್ಲಾಮ್ ಕಿಡಕ್ಕ ವಿನಿಪ್ಪೋಯ್,
ಶೇರಿ ಪಲ್ಪಳಿತೂವಿ ಯಿರೈಪ್ಪ ತ್ತಿರುಕ್ಕೋಳೂರ್ಕ್ಕೇ,
ನೇರಿಳೈ ನಡನ್ದಾಳೆಮ್ಮೈಯೊನ್ಱುಮ್ ನಿನೈಕ್ಕಿಲಳೇ

ಪ್ರ|| ನಲ್ಲನಕಳ್ ಕಾರ್ಯಮ್ ಅನ್ನೈ-ಚೆನ್ನಾಗಿ ರಚಿಸಲ್ಪಟ್ಟಿರುವ ಆಯಾ ವಸ್ತುಗಳನ್ನು, ಕಾಣಿಲ್-ಕಂಡರೆ, ಎ಼ ಕಣ್ಣನುಕ್ಕು-ನನ್ನ ಶ್ರೀಕೃಷ್ಣನಿಗೆ, ಎನ್ಱು-ಎಂದು, ಈರಿಯಾಯ್-ಆರ್ದ್ರಸ್ವಭಾವವುಳ್ಳವಳಾಗಿ, ಇರುಪ್ಪಾಳ್-ಇರುವವಳು, ನೇರ್ ಇಳೈ-ಶ್ಲಾಘ್ಯವಾದ ಆಭರಣವುಳ್ಳವಳಾಗಿ, ಇದು ಎಲ್ಲಾಮ್ ಕಿಡಕ್ಕ-(ಅವನಿಗೋಸ್ಕರ-ಎಂದು ತಾನು ಸಂಕಲ್ಪಿಸಿದ) ಇದು ಎಲ್ಲಾ ಇರುತ್ತಿರಲು, ಇನಿ ಪೋಯ್-(ಇದನ್ನೆಲ್ಲಾ) ಬಿಟ್ಟುಹೋಗಿ, ಶೇರಿ-ಬೀದಿಯಲ್ಲಿರುವವರು, ಪಲ್ ಪಳಿ-ಅನೇಕವಿಧವಾದ ನಿಂದೆಗಳನ್ನು, ತೂವಿ (ತೂ ಉಯ್)-ಸುರಿದು (ವರ್ಷಿಸಿ), ಇರೈಪ್ಪ - ಘೋಷಿಸುತ್ತಿರಲು, ತಿರುಕ್ಕೋಳೂರ್ಕ್ಕೇ - ತಿರುಕ್ಕೋಳೂರಿಗೇ, ನಡನ್ದಾಳ್-ಹೋಗಿಬಿಟ್ಟಳು. ಎಮ್ಮೈ-ನಮ್ಮನ್ನು, ಒನ್ಱುಮ್ ನಿನೈತ್ತಿಲಳ್-ಸ್ವಲ್ಪವೂ (ಯಾವಪ್ರಕಾರದಲ್ಲೂ) ಸ್ಮರಿಸುವುದೇ ಇಲ್ಲ.

( ಸ-ಗಾ-ರ || )—

ಭೋಗ್ಯಂ ರಮ್ಯಪದಾರ್ಥಜಾತಮಖಿಲಂ ಕೃಷ್ಣಾಯ ಸಙ್ಕಲ್ಪಯೇ
ದ್ಯಾ ದಿವ್ಯಾಭರಣಾ ಕಿಲಾರ್ದ್ರಹೃದಯಾ ಸನ್ತ್ಯಜ್ಯ ಸರ್ವಂ ತ್ವಿದಮ್ |
ಪೌರಸ್ತ್ರೀಪರಿವಾದಜಲ್ಪವಿವಶಾ ವಿಸ್ಮೃತ್ಯ ಸರ್ವಾತ್ಮ ನಃ
ಶ್ರೀಕೋಳೂರುಪುರಂ ಗತಾ ಮಮ ಸುತಾ ಸರ್ವಾಸ್ವ್ಯಶೀಕೃತ್ಯ ನಃ ||

ತಾ|| ಒಳ್ಳೇ ಪದಾರ್ಥಗಳನ್ನು ಕಂಡರೆ—"ನನ್ನ ಕೃಷ್ಣನಿಗೆ"—ಎಂದು ಅತ್ಯನ್ತ ಪ್ರೀತಿಯುಳ್ಳವಳಾಗಿ ಇರುವ ದಿವ್ಯಾಭರಣಭೂಷಿತೆಯಾದ ಇವಳು, ಎಲ್ಲವನ್ನೂ ಬಿಟ್ಟು, ಪಕ್ಕದ ಬೀದಿಯಲ್ಲಿರುವವರೆಲ್ಲಾ ನಿಂದಿಸುವಂತೆ, ತಿರುಕ್ಕೋಳೂರಿಗೇ ಹೋಗಿಬಿಟ್ಟಳು. ನಮ್ಮನ್ನು ಸ್ವಲ್ಪವೂ ಸ್ಮರಿಸುವುದೇ ಇಲ್ಲ.

(೧೦) ನಿನೈಕ್ಕಿಲೇನ್ ತೆಯ್ವಙ್ಗಾಳ್ ನೆಡುಙ್ಕಣ್ಣಿಳಮಾನಿನಿಪ್ಪೋಯ್
ಅನೈತ್ತುಲಕುಮುಡೈಯ ಅರವಿನ್ದಲೋಚನನೈ,
ತಿನೈತ್ತನೈಯುಮ್ ವಿಡಾಳವನ್ ಶೇರ್ ತಿರುಕ್ಕೋಳೂರ್‌ಕ್ಕೇ
ಮನೈಕ್ಕು ವಾನ್ಪಳಿಯುಮ್ ನಿನೈಯಾಳ್ ಶೆಲ್ಲವೈತ್ತನಳೇ.

ಪ್ರ|| ತೆಯ್ವಙ್ಗಾಳ್ ದೈವಗಳೇ!, ನಿನೈಕ್ಕಿಲೇನ್ - (ಇವಳ ಅತಿ ಪ್ರವೃತ್ತಿಯನ್ನು) ಸ್ಮರಿಸಲಾರೆನು. ನೆಡುಙ್ಕಣ್-ವಿಶಾಲ ನೇತ್ರಗಳುಳ್ಳ, ಇಳಮಾನ್-ಎಳೇ ಹುಲ್ಲೇಕರುವಿನಂತೆ ಇರುವ ಇವಳು, ಇನಿಪ್ಪೋಯ್-ಇನ್ನುಮೇಲೆ (ಈ ವೇಳೆಗೆ) ಹೋಗಿ, ಅನೈತ್ತು ಉಲಕುಮುಡೈಯ - ಸಕಲ ಲೋಕಾಧಿಪತಿಯಾದ, ಅರವಿನ್ದಲೋಚನನೈ - ಪುಣ್ಡರೀಕಾಕ್ಷನನ್ನು, ತಿನೈತ್ತನೈಯುಮ್ - ಸ್ವಲ್ಪಹೊತ್ತೂ, ವಿಡಾಳ್-ಬಿಡದವಳಾಗಿ, ಅವನ್ ಶೇರ್ - ಅವನು ಸೇರಿ ವಾಸಮಾಡುತ್ತಿರುವ, ತಿರುಕ್ಕೋಳೂರ್‌ಕ್ಕೇ-ತಿರುಕ್ಕೋಳೂರಿಗೇ, ಶೆಲ್ಲವೈತ್ತನಳೇ-ಶೀಘ್ರವಾಗಿ ಹೋಗಿಬಿಟ್ಟಳು. ಮನೈಕ್ಕು-(ತನ್ನ) ಕುಲಕ್ಕೆ ಬರುವ, ವಾನ್ಪಳಿಯುಮ್-ಅಧಿಕವಾದ ಅಪವಾದವನ್ನೂ, ನಿನೈಯಾಳ್-ಚಿನ್ತಿಸುವುದಿಲ್ಲ.

( ಸ-ಗಾ-ರ || )—

**ಭೋ ದೇವಾಃ ಕಥಮದ್ಯ ಚಿನ್ತ್ಯಮಿಹ ಮೇ ಸೇಯಂ ಸುತಾ ಶ್ರೀಹರಿಂ**
**ಲೋಕೇಶಂ ತ್ವರವಿನ್ದಲೋಚನಮಮುಂ ನೇಷಚ್ಚ ಜಾತು ತ್ಯಜೇತ್ |**
**ಶ್ರೀಕೋಳೂರ್‌ಪುರಮದ್ಯ ತಸ್ಯ ಹಿ ಗತಾ ದ್ರಾಗೇವ ಮುಗ್ಧಾ ಮೃಗೀ**
**ನೈವೇಯಂ ಕಿಲ ಚಿನ್ತಯೇನ್ನಿಜಕುಲಸ್ಯೇದಂ ಕಳಙ್ಕಾಯಿತಮ್ ||**

ತಾ|| ದೈವಗಳೇ! ಇವಳ ಉಚ್ಛೃಂಖಲ ಪ್ರವೃತ್ತಿಯನ್ನು ನಾನು ಸ್ಮರಿಸಲಾರೆನು. ವಿಶಾಲನೇತ್ರೆಯಾದ ತರುಣಹರಿಣೀಶಿಶುವಿನಂತೆ ಇರುವ ಇವಳು—ಸಕಲ ಲೋಕಾಧಿಪತಿಯಾದ ಅರವಿನ್ದಲೋಚನನನ್ನು ಸ್ವಲ್ಪಹೊತ್ತೂ ಬಿಡದೆ, ಅವನು ವಾಸಮಾಡುವ ತಿರುಕ್ಕೋಳೂರಿಗೇ ಹೋಗಿ ಈ ವೇಳೆಗೆ ಶೀಘ್ರವಾಗಿ ಸೇರಿಬಿಟ್ಟದಾಳೆ. ತನ್ನ ಕುಲಕ್ಕೆ ಬರುವ ಪ್ರಬಲವಾದ ಅಪವಾದವನ್ನೂ ಕೂಡ ಎಣಿಸುವುದಿಲ್ಲ.

(೧೧) ವೈತ್ತಮಾನಿದಿಯಾವಣ್ ಮದುಶೂದನ್ನೈಯೇ ಯಾಲಱ್ಱಿ,
ಕೊತ್ತಲರ್‌ಪ್ಪೊೞಿಲ್ ಶೂೞ್ ಕುರುಕೂರ್
ಚ್ಚಡಕೋಪನ್ ಶೊನ್ನ,
ಪತ್ತುನೂಱ್ಱುಳಿಪ್ಪತ್ತವನ್ ಶೇರ್ ತಿರುಕ್ಕೋಳೂರ್‌ಕ್ಕೇ,
ಶಿತ್ತಮ್ ವೈತ್ತುರೈಪ್ಪಾರ್ ತಿಕೞ್ ಪೊನ್ನುಲಕಾಳ್ವಾರೇ.

ಪ್ರ॥ ವೈತ್ತಮಾನಿದಿಯಾಮ್-ರಕ್ಷಿಸಲ್ಪಟ್ಟ ಮಹಾನಿಧಿರೂಪವಾದ, ಮದುಶೂದನ್ನೈಯೇ-ಮಧುಸೂದನನನ್ನೇ, ಅಲಱ್ಱಿ-ಸ್ತೋತ್ರಮಾಡಿ, ಕೊತ್ತು ಅಲರ್ ಪೊೞಿಲ್ - ಪುಷ್ಪಗುಚ್ಛಗಳುಳ್ಳ ಉದ್ಯಾನಗಳಿಂದ, ಶೂೞ್ - ಪರಿವೃತವಾದ, ಕುರುಕೂರ್-ಕುರುಕಾಪುರಿಯ, ಶಡಕೋಪನ್-ಶ್ರೀ ಶಠಾರಿಮುನಿಯು, ಶೊನ್ನ-ರಚಿಸಿದ, ಪತ್ತುನೂಱ್ಱುಳ್ - ಹತ್ತುನೂರಾದ ಒಂದುಸಾವಿರ ಪ್ರಬನ್ಧಮಾಲೆಯೊಳು, ಇಪ್ಪತ್ತು - ಈ ದಶಕವನ್ನು, ಅವನ್ ಶೇರ್ - ಅವನು ವಾಸಮಾಡುವ, ತಿರುಕ್ಕೋಳೂರ್‌ಕ್ಕೇ-ತಿರುಕ್ಕೋಳೂರಿಗೇ, ಶಿತ್ತಮ್ ವೈತ್ತು-ಮನಸ್ಸಿಟ್ಟು, ಉರೈಪ್ಪಾರ್-ಹೇಳಬಲ್ಲವರು, ತಿಕೞ್-(ಭಗವದನುಭವದಿಂದ) ಪ್ರಕಾಶಮಾನವಾದ, ಪೊನ್ ಉಲಕು-ಶ್ಲಾಘ್ಯವಾದ ಪರಮಪದವನ್ನೂ, ಆಳ್ವಾರೇ-ಆಳುವರಪ್ಪ !

( ಸ-ಗಾ-ರ ॥ )—

ನಿಕ್ಷೇಪಂ ಮಧುಸೂದನಂ ನಿಜಮಹಾನಿಧ್ಯಾತ್ಮಕಂ ಶ್ರೀಹರಿಂ
ಸ್ತೋತುಂ ಶ್ರೀಕುರುಕಾಪುರಪ್ರಭುರಸೌ ಮೌನೀ ಶಠಾರಿಃ ಕವಿಃ ।
ಸಾಹಸ್ರಂ ಪರಮಂ ಜಗೌ ಚ ತದಿದಂ ಯೇ ಯೇ ಪಠನ್ತಿ ಸ್ವಯಂ
ಶ್ರೀಕೋಳೂರುಪುರಂ ವಿಚಿನ್ತ್ಯ ದಶಕಂ ತೇ ದಿವ್ಯಧಾಮೇಶ್ವರಾಃ ॥

ತಾ॥ ಮಹಾನಿಧಿಯಂತೆ ಇರುವ ಮಧುಸೂದನನನ್ನೇ ಸ್ತೋತ್ರಮಾಡಿ, ಪುಷ್ಪೋದ್ಯಾನಭರಿತವಾದ ಕುರುಕಾಪುರಿಯ ಶ್ರೀ ಶಠಾರಿಮುನಿಯು ರಚಿಸಿ ಇರುವ ಸಹಸ್ರಪದ್ಯಮಾಲೆಯೊಳು, ಈ ದಶಕವನ್ನು ತಿರುಕ್ಕೋಳೂರಿನಲ್ಲೇ ಮನಸ್ಸುಳ್ಳವರಾಗಿ ಹೇಳಬಲ್ಲವರು ದಿವ್ಯ ತೇಜಃಪ್ರಕಾಶವುಳ್ಳ ಪರಮಪದವನ್ನೂ ಆಳುವರಪ್ಪ !

( ದ್ರು-ಉ-ಸಂ ॥ )—

ಕೃಷ್ಣೇನ ಧಾರಯಿತೃಪೋಷಕಭೋಗ್ಯಯೋಗೀ
ಪ್ರಾಪ್ತಾವತಿತ್ವರಿತಧೀರಖಿಲಾನ್ ವಿಹಾಯ ।
ಸ್ಯಾದಪ್ಯಲಬ್ಧಫಲ ಇತ್ಯವಹೀಯಮಾನಃ
ಪಾರ್ಶ್ವಸ್ಥಿತೈರ್ಮುನಿರಭೂದಧಿಸಪ್ತಮಂ ಸಃ ॥

( ದ್ರ–ಉ–ತಾ–ರ || )—

ಪಾರಮ್ಯಾದ್ಭವ್ಯಭಾವಾತ್ ಸ್ರಗಭಿಹಿತಿವಮುಖ್ಯೈಶ್ಶ್ರೀಶತೈಶ್ವರ್ಯಭೂಮ್ನಾ
ಸ್ನೇಹಿತ್ವಾದಾಭಿರೂಪ್ಯಾಚ್ಛ್ರಿತಪರವಶತಾಸರ್ವಲೋಕೇಶತಾದ್ಯೈಃ |
ಧೃತ್ಯಾದೇರಾದಿಹೇತುಂ ಮುರಮಥನಮಥ ವ್ಯಾಹರತ್ಯಂಶ್ರಿತಾನಾಂ
ವೇದಾನಾಗಸ್ತ್ಯಭಾಷಾವಪುಷ ಉದಧರಚ್ಛ್ರೇಯಸೇ ದೇಹಿನಾಂ ೧೬||

(ಈ ಸಪ್ತಮದಶಕದ ಸಾರಾಂಶ)—

ಈ ಏಳನೆಯ ದಶಕದಲ್ಲಿ—ಶ್ರೀ ಶಠಾರಿಯೆಂಬ ನಾಯಕಿಯು ತನಗೆ ಧಾರಕ-ಪೋಷಕ – ಭೋಗ್ಯವಾದುದೆಲ್ಲಾ ಶ್ರೀಕೃಷ್ಣನೇ—ಎಂದು ಅವನನ್ನೇ ಸ್ಮರಿಸಿ ಕಣ್ಣುನೀರು ತುಂಬಿಕೊಂಡು ಅವನು ವಾಸಮಾಡುವ ತಿರುಕ್ಕೋಳೂರಿಗೇ ಹೋಗಿ ಬಿಟ್ಟಿದಾಳೆಂದು ಇವಳ ತಾಯಿಯು ಅತ್ಯಂತ ಚಿನ್ತಾಕ್ರಾನ್ತೆಯಾಗಿ ಹೇಳುವಂತೆ ವರ್ಣಿಸಲ್ಪಟ್ಟಿದೆ.

---

# ಶ್ರೀಃ

## ಷಷ್ಠಶತಕದಲ್ಲಿ—ಅಷ್ಟಮದಶಕ

(ಪೊನ್ನುಲಕಾಳೀರೋ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ ನಾಯಕನನ್ನು ಕುರಿತು ಪಕ್ಷಿಗಣಗಳನ್ನು ದೌತ್ಯಕೃತ್ಯದಲ್ಲಿ ಪ್ರೇರಿಸುತ್ತಾರೆ)

---

(೧) ಪೊನ್ನುಲಕಾಳೀರೋ ಪುವನಿಮುಳುದಾಳೀರೋ,
ನನ್ನುಲ ಪುಳ್ಳಿನಙ್ಗಾಳ್ ವಿನೈಯಾಟ್ಟಿಯೇನ್ ನಾನಿರನ್ದೇನ್,
ಮುನ್ನುಲಕಙ್ಗಳೆಲ್ಲಾಮ್ ಪಡೈತ್ತ ಮುಕಿಲ್ವಣ್ಣನ್ ಕಣ್ಣನ್,
ಎನ್ನಲಮ್ ಕೊಣ್ಡ ಪಿರಾನ್ ತನಕ್ಕೆನ್ನಿಲೈಮೈ ಯುರೈತ್ತೇ.

ಪ್ರ॥ ನನ್ನಲ–ವಿಲಕ್ಷಣ ಸ್ನೇಹವುಳ್ಳ, ಪುಳ್ಳಿನಙ್ಗಾಳ್ – ಪಕ್ಷಿಗಣಗಳೇ !, ವಿನ್ನೈಯಾಟ್ಟಿಯೇನ್ – ಪಾಪಿನಿಯಾದ, ನಾನ್–ನಾನು, ಇರನ್ದೇನ್ – (ನಿಮ್ಮನ್ನು) ಪ್ರಾರ್ಥಿಸಿ ಇದೇನೆ. (ಅದೇನೆಂದರೆ—) ಮುನ್–ಪೂರ್ವದಲ್ಲಿ, ಉಲಕಙ್ಗಳ್ ಎಲ್ಲಾಮ್–ಲೋಕಗಳನ್ನೆಲ್ಲಾ, ಪಡೈತ್ತ–ಸೃಷ್ಟಿಸಿದ, ಮುಕಿಲ್ವಣ್ಣನ್–ನೀಲ ಮೇಘವರ್ಣನಾದ, ಕಣ್ಣನ್–ಆಶ್ರಿತರಿಗೆ ಸುಲಭನಾದ ಕೃಷ್ಣನಾದ, ಎನ್ ನಲಮ್ ಕೊಣ್ಡ–ನನ್ನ ಶೀಲವನ್ನೆಲ್ಲಾ ಅಪಹರಿಸಿದ, ಪಿರಾನ್ ತನಕ್ಕು–ಸ್ವಾಮಿಗೆ, ಎನ್ ನಿಲೈಮೈ–ನನ್ನ ಈ ಸ್ಥಿತಿಯನ್ನು, ಉರೈತ್ತು–ಹೇಳಿ, ಪೊನ್ ಉಲಕು–ಅತ್ಯಂತ ರಮಣೀಯವಾದ ಪರಮಪದವನ್ನು, ಆಳೀರೋ–ಆಳುವಿರೋ, ಪುವನಿಮುೞುದು–ಭೂಮಿ ಮುಂತಾದ ಲೀಲಾವಿಭೂತಿಯನ್ನೆಲ್ಲಾ, ಆಳೀರೋ – ಆಳುವಿರೋ. (ಉಭಯ ವಿಭೂತಿಗಳೂ ನಿಮಗೆ ವಶ್ಯಗಳಾಗುವುವು.)

( ಸ–ಗಾ–ರ॥ )—

ಯೂಯಂ ಸ್ನೇಹಪರಾಃ ಸುಪಕ್ಷನಿವಹಾಃ! ಪಾಪಿನ್ಯಹಂ ಪ್ರಾರ್ಥಯೇ
ಯುಷ್ಮಾನ್ ಕಿಞ್ಚಿದಿದಂ ಪುರಾಽಖಿಲಜಗತ್ಸ್ರಷ್ಟಾ ಪಯೋದಾಕೃತಿಃ !
ಕೃಷ್ಣಂ ತಂ ಮಮ ನಾಯಕಂ ಪ್ರಭುಮಿಮಾಂ ಮೇ ದುರ್ದಶಾಂ
ಬ್ರೂತ ಭೋ !
ಯುಷ್ಮಾಕಂ ಪರಮೇ ಪದೇಽಪಿ ಭುವಿ ಚ ಸ್ಯಾದಾಧಿರಾಜ್ಯಂ ತತಃ ॥

ತಾ॥ ಅತ್ಯಂತ ಸ್ನೇಹವುಳ್ಳ ಪಕ್ಷಿಗಣಗಳೇ! ಪಾಪಿನಿಯಾದ ನಾನು ನಿಮ್ಮನ್ನು ಪ್ರಾರ್ಥಿಸುವುದೇನೆಂದರೆ—ಸಕಲಲೋಕ ಸೃಷ್ಟಿಕರ್ತನಾದ, ನೀಲಮೇಘವರ್ಣನಾದ ಶ್ರೀಕೃಷ್ಣನು ನನ್ನ ಶೀಲವನ್ನೆಲ್ಲಾ ಅಪಹರಿಸಿರುವುದರಿಂದ ನೀವು ಅವನಿಗೆ ನನ್ನ ಈ ಅವಸ್ಥೆಯನ್ನು ತಿಳಿಸಿರಿ. ಅವನಿಗೆ ಇದನ್ನು ನೀವು ಹೇಳಿದರೆ ಉಭಯ ವಿಭೂತಿಸಾಮ್ರಾಜ್ಯವೂ ನಿಮಗೆ ಹಸ್ತಗತವಾಗುವುದು.

(೨) ಮೈಯಮರ್ ವಾಳ್ನೆಡುಙ್ಕಣ್ ಮಙ್ಗೈಮಾರ್ ಮುನ್ಬಿಲ್
ಕೈಯಿರುನ್ದು, ನೆಯ್ಯಮರಿನ್ನಡಿಶಿಲ್ ನಿಚ್ಚಲ್
ಪಾಲೊಡು ಮೇವೀರೋ,
ಕೈಯಮರ್ ಶಕ್ಕರತ್ತೆನ್ ಕನಿವಾಯ್ ಪ್ಪೆರುಮಾನೈ ಕ್ಕಣ್ಡು,
ಮೆಯ್ಯಮರ್ಕಾದಲ್ ಶೊಲ್ಲಿ ಕ್ಕಿಳಿಕಾಳ್ ವಿರೈನ್ದೋಡಿವನ್ದೇ.

ಪ್ರ॥ ಶಿಳಿಕಾಳ್-ಗಿಣಿಗಳೇ !, ಕೈಯಮರ್ ಶಕ್ಕರಮ್-ಕೈಯಲ್ಲಿ ಚೆನ್ನಾಗಿ ಸೇರಿ ಪ್ರಕಾಶಿಸುವ ಚಕ್ರವುಳ್ಳ, ಕನಿವಾಯ್-ಬಿಂಬಾಧರವುಳ್ಳ, ಎನ್ ಪೆರುಮಾನೈ-ನನ್ನ ಸ್ವಾಮಿಯನ್ನು, ಕಣ್ಡು-ಕಂಡು, ಮೆಯ್ ಅಮರ್ ಕಾದಲ್-(ಅವನ) ಶರೀರ ಸಙ್ಗಮವನ್ನು ಹೊಂದಬೇಕೆಂಬ (ನನ್ನ) ಆಶೆಯನ್ನು, ಶೊಲ್ಲಿ-ಹೇಳಿ, ವಿರೈನ್ದು - ಶೀಘ್ರವಾಗಿ, ಓಡಿವನ್ದು - ಓಡಿಬಂದು, ಮೈ ಅಮರ್ -(ಕಣ್ಣಿನ) ಅಂಜನವು ಚೆನ್ನಾಗಿ ವ್ಯಾಪಿಸಿ, ವಾಳ್-ಪ್ರಕಾಶಿಸುವ, ನೆಡುಙ್ಕಣ್-ವಿಶಾಲವಾದ ನೇತ್ರಗಳುಳ್ಳ, ಮಙ್ಗೈಮಾರ್‌ಮುನ್ಬು - ಸ್ತ್ರೀಜನರ (ಸಖೀಜನರ) ಮುಂದೆ, ಎನ್ ಕೈ-ನನ್ನ ಕೈಯಲ್ಲಿ, ಇರುನ್ದು - (ನೀವು) ಕುಳಿತು, ನೆಯ್ ಅಮರ್-ತುಪ್ಪ ದೊಡನೆ ಕೂಡಿದ, ಇನ್ ಅಡಿಶಿಲ್-ಮಧುರವಾದ ಅನ್ನವನ್ನು, ಪಾಲೊಡು-ಹಾಲಿನೊಡನೆ, ನಿಚ್ಚಲ್-ನಿತ್ಯವಾಗಿ, ಮೇವೀರ್-ಸ್ವೀಕರಿಸಿರಿ.

( ಸ-ಗಾ-ರ ॥ )—

ಯೂಯಂ ಮೇಽದ್ಯ ಶುಕಾಃ ಪ್ರಭುಂ ಮಮ ಹರಿಂ ಶ್ರೀಚಕ್ರಪಾಣಿಂ ಚ ತಂ
ಬಿಮ್ಬೋಷ್ಠಂ ಸಹಸಾ ವಿಲೋಕ್ಯ ತನುಸಙ್ಗಾಶಾಂ ಚ ಮೇ ಬ್ರೂತ ಭೋಃ।
ಕ್ಷಿಪ್ರಂ ಮಾಂ ಪ್ರತಿ ತದ್ವಚೋಽಪಿ ವದತ ಶ್ರೀಮತ್ಸಖೀನಾಂ ಪುರಃ
ಸ್ಥಿತ್ವಾ ಮೇ ಕರತಲ್ಪ ಸಾಜ್ಯಮಧುರಕ್ಷೀರಾನ್ನಭಾಜಸ್ಸ್ತ ಭೋಃ ! ॥

ತಾ॥ ನನ್ನ (ಪ್ರಿಯವಾದ) ಗಿಣಿಗಳೇ ! ಚಕ್ರಪಾಣಿಯಾದ ಬಿಂಬಾಧರವುಳ್ಳ ನನ್ನ ಸ್ವಾಮಿಯನ್ನು ಕಂಡು, ಅವನ ಶರೀರ ಸಂಶ್ಲೇಷವನ್ನು ಹೊಂದಬೇಕೆಂಬ ನನ್ನ ಆಶೆಯನ್ನು ಅವನಿಗೆ ಹೇಳಿ, ಓಡಿಬಂದು, ವಿಶಾಲನೇತ್ರಗಳಾದ ನನ್ನ ಸಖೀಜನರ ಮುಂದೆ ನೀವು ನನ್ನ ಕೈಮೇಲೆ ಕುಳಿತು ಕ್ಷೀರಾಜ್ಯ ಶರ್ಕರಾ ಸಮೇತವಾದ ಮಧುರಾನ್ನವನ್ನು (ನಿತ್ಯವೂ) ಸ್ವೀಕರಿಸಿರಿ.

(೩) ಓಡಿವನ್ದಿನ್ ಕುೞಲ್‌ಮೇಲೊಳಿ ಮಾಮಲರೂದೀರ್‌ಗಳ್,
ಕೂಡಿಯ ವಣ್ಡಿನಙ್ಗಾಳ್ ಕುರುನಾಡುಡ್ಡೈ ಐವರ್‌ಕಳ್ಕಾಯ್,
ಆಡಿಯ ಮಾನೆಡುನ್ತೇರ್‌ಪಡೈ ನೀಱ್ಱು ಚ್ಚೆಲ್ಲ ಪಿರಾನ್,
ಶೂಡಿಯ ತಣ್ಣುೞಾಯಮುಣ್ಡ್ ತೂಮದುವಾಯ್‌ಕಳ್ ಕೊಣ್ಡೇ.

ಪ್ರ॥ ಕೂಡಿಯ-ಪರಸ್ಪರ ಸೇರಿರುವ, ವಣ್ಡಿನಙ್ಗಾಳ್-ಭ್ರಮರ ಸಮೂಹಗಳೇ !, ಕುರುನಾಡುಡೈ-ಕುರುಕ್ಷೇತ್ರ ನಿರ್ವಾಹಕರಾದ, ಐವರ್‌ಕಳ್ಕಾಯ್-ಐದು ಮಂದಿ ಪಾಣ್ಡವರಿಗೋಸ್ಕರ, ಆಡಿಯ-ದರ್ಶನೀಯವಾದ ಗಮನವುಳ್ಳ, ಮಾ-ಕುದುರೆಗಳನ್ನೂ, ನೆಡುಮ್ ತೇರ್ ಉನ್ನತವಾದ ರಥಗಳನ್ನೂ, ಪಡೈ-ಸೈನ್ಯವನ್ನೂ,

ನೀಙ್ಗಳ್-ಧೂಳಿಯಾಗುವಂತೆ, ಶೆಗ್ರ- ನಾಶಮಾಡಿದ, ಪಿರಾ-ಸ್ವಾಮಿಯಾದ ಕೃಷ್ಣನು, ಶೂಡಿಯ-ಧರಿಸಿರುವ, ತಣ್ ತುಳವಮ್-ಶೀತಳವಾದ ತುಳಸಿಯಲ್ಲಿ, ಉಣ್ಡು-ಮಧುಪಾನಮಾಡಿದ, ತೂ-ನಿರ್ಮಲವಾದ, ಮದು-ಮಧುವುಳ್ಳ, ನಾಯ್ ಕಳ್-ವಕ್ತ್ರಗಳನ್ನು, ಕೊಣ್ಡು ಪಡೆದು, ಓಡಿವನ್ದು - ಓಡಿಬಂದು, ಎನ್‌ಕುೞಲ್ ಮೇಲ್- ನನ್ನ ಕೂದಲುಗಳಮೇಲೆ, ಒಳಿ-ಪ್ರಕಾಶಿಸುವ ರಮ್ಯವಾದ, ಮಾಮಲರ್-ಶ್ಲಾಘ್ಯವಾದ ಪುಷ್ಪಗಳಮೇಲೆ, ಊದೀರೋ-ಊದಿರಿ (ಆ ಮಧುವನ್ನು ತಂದು ನನ್ನ ತಲೆಯ ಪುಷ್ಪಗಳಲ್ಲಿ ವರ್ಷಿಸಿರಿ )

( ಸ-ಗಾ-ರ ॥ )—

ಯೂಯಂ ಮೈತ್ರಿಯುಷಟ್ಪದಾಃ ! ಶುಭಕುರುಕ್ಷೇತ್ರಾಧಿಪಾನಾಂ ಪುರಾ
ಪಾರ್ಥಾನಾಂ ಚ ಸುಹೃತ್ತಮೋಽಶ್ವಸರಣಿಂ ತಾಂ ಸೈನ್ಯನಾಳಿಂ ಚಮೂಮ್।
ಸರ್ವಾಂ ಚಾಪಿ ವಿನಾಶ್ಯ ಯಃ ಪ್ರಭುರಭೂತ್ತಸ್ಯಾಚ್ಯುತಸ್ಯಾದ್ಭುತಾಂ
ಪೀತ್ವಾ ತಾಂ ತುಲಸೀಂ ಮಮಾಪಿ ಶಿರಸಿ ಸ್ರಕ್ಪಾನಸಕ್ತಾಸ್ಸ್ತ ಭೋಃ ! ॥

ತಾ॥ ಪರಸ್ಪರ ಮೈತ್ರಿಯಿಂದ ಸೇರಿರುವ ಭ್ರಮರ ಸಮೂಹಗಳೇ ! ಕುರು ಕ್ಷೇತ್ರಾಧಿಪರಾದ ಪಾಂಡವರಿಗೋಸ್ಕರ, ಅಶ್ವರಥಾದಿಗಳಿಂದ ಕೂಡಿದ ಸಕಲ ಸೈನ್ಯವನ್ನೂ ನಾಶಮಾಡಿದ ಶ್ರೀಕೃಷ್ಣನು ಧರಿಸಿರುವ ತುಳಸೀಮಾಲೆಯಲ್ಲಿ ನೀವು ಮಧುಪಾನವಂಮಾಡಿ ಓಡಿಬಂದು ನನ್ನ ತಲೆಯ ಕೂದಲುಗಳಮೇಲಿರುವ ಪುಷ್ಪ ಗಳಲ್ಲಿರುವ ಮಧುಪಾನಕ್ಕಾಗಿ ಯತ್ನಿಸಿ ಆ ಮಧುವನ್ನು ನನ್ನ ತಲೆಯ ಪುಷ್ಪಗಳ ಮೇಲೆ ವರ್ಷಿಸಿ ನನಗೆ ಸಂಶ್ಲೇಷರಸವನ್ನು ಉಂಟುಮಾಡಿರಿ—ಎಂದು ತಾತ್ಪರ್ಯ.

(೪) ತೂಮದುವಾಯ್‌ಕಳ್ ಕೊಣ್ಡು ವನ್ದು
ಮುಲ್ಲೈಕಳ್‌ಮೇಲ್ ತುಮ್ಬಿಕಾಳ್,
ಪೂಮದುವುಣ್ಣ ಚ್ಚೆಲ್ಲಿಲ್ ವಿನ್ನೈಯೇನ್ನೈ
ಪ್ಪುಣ್ಣಿಯರ್‌ಶೆಯ್ದುಕನ್ರ,
ಮಾಮದುವಾರ್ ತಣ್ಡುೞಾಯ್‌ಮುಡಿ
ವಾನವರ್‌ಕೋನೈ ಕ್ಕಣ್ಡು,
ಯಾಮಿದ ವ್ರೋ ತಕ್ಕವಾಱನ್ನವೇಣ್ಡುಙ್ಗಣ್ಡೀರ್
ನುಙ್ಗಳ್ಕೇ.

ಪ್ರ|| ಎಣ್ ಮುಲ್ಲೈಕಳ್‌ಮೇಲ್ – ನಾನು ಬೆಳೆಸಿದ ಮೊಲ್ಲೆಬಳ್ಳಿಗಳಲ್ಲಿರುವ ಪುಷ್ಪಗಳಮೇಲೆ, ತುಮ್ಬಿಕಾಳ್ – (ವಾಸಮಾಡುವ) ದುಂಬಿಗಳೇ !, ತೂಮದು ವಾಯ್‌ಕಳ್‌ಕೊಣ್ಡು – ಪರಿಶುದ್ಧವಾದ (ನಿಮಗೆ ಸಹಜವಾದ) ಮಧುವನ್ನು ಬಾಯಿಯಲ್ಲಿ ಧರಿಸಿಕೊಂಡು, ವನ್ದು-ಬಂದು, ಪೂಮದು ಉಣ್ಣ-ಆ ಹೂವುಗಳಲ್ಲಿರುವ ಮಧುವನ್ನು ಪಾನಮಾಡುವುದಕ್ಕಾಗಿ, ಶೆಲ್ಲಿಲ್ – ಹೋಗುತ್ತಿರುವಿರಾದರೆ, (ಈ ಅವಸ್ಥೆಯಲ್ಲಿ ಅವುಗಳೆಲ್ಲಾ ಬಾಡಿಹೋಗಿರುವುದರಿಂದ) ವಿನ್ಯೆಯೇನ್ನೈ–ಪಾಪಿನಿಯಾದ ನನ್ನನ್ನು, ಪೊಯ್ ಶೆಯ್ದು-ಕೃತ್ರಿಮವಂಮಾಡಿ ವಂಚಿಸಿ, ಅಕನ್ಱ–ಬಿಟ್ಟು ಹೊರಟುಹೋದ, ಮಾಮದುವಾರ್ – ಮಹಾ ಪ್ರವಾಹರೂಪವಾದ ಮಧುವಿನಿಂದ ಭರಿತವಾದ, ತಣ್ ತುೞಾಯ್‌ಮುಡಿ – ಶೀತಳವಾದ ತುಳಸಿಯನ್ನು ಶಿರಸ್ಸಿನಲ್ಲಿ (ಕಿರೀಟದಲ್ಲಿ) ಧರಿಸಿರುವ, ವಾನವರ್‌ಕೋನ್ನೈ–ನಿತ್ಯಸೂರಿಗಳಿಗೆ ಸ್ವಾಮಿಯಾದವನನ್ನು, ಕಣ್ಡು–ನೋಡಿ, ನುಙ್ಗಳ್ಕು–ನಿಮಗೆ, ಯಾಮ್ – ನಾವು, ಇದುವೋತಕ್ಕವಾಱು – ಹೀಗೆ ಸ್ತೋತ್ರಮಾಡುವುದೇ ಉಚಿತವೋ ?— (ಅವಳನ್ನು ನೀವು ಬಿಟ್ಟಿರಬಹುದೋ?) ಎನ್ನವೇಣ್ಡುಮ್ ಕಣ್ಡೀರ್—ಎಂದು ಹೇಳಬೇಕು ಕಾಣಿರಿ.

( ಸ-ಗಾ-ರ || ) —

ಯೂಯಂ ಮೇ ಕುಟಿಜಾತ್ರಯಾ ಮಧುಕರಾಃ! ಪ್ರೀತ್ಯಾಽತ್ರ ಪಾನಾರ್ಥಂಯಾ
ಸಕ್ತಾಶ್ಚೇದಿಹ ಪಾಪಿನೀಂ ಸಪದಿ ಮಾಂ ಯೋ ಪಶ್ಯಾಯನ್ ವರ್ತತೇ |
ದಿವ್ಯೇ ಧಾಮನಿ ಸೂರಿವರ್ಯಪರಿಷನ್ನಾಥಂ ವಿಲೋಕ್ಯೈವ ತಂ
ದಿವ್ಯಶ್ರೀತುಲಸೀಧರಂ ವದತ ಕಿಂ ಯುಕ್ತಂ ತವೇದಂ ತ್ವಿತಿ ||

ತಾ|| ನಾನು ಬೆಳೆಸಿದ ಮೊಲ್ಲೆಗಿಡಗಳಲ್ಲಿ ಮಧುಪಾನಕ್ಕಾಗಿ ಬರುತ್ತಿರುವ ದುಂಬಿಗಳೇ ! ಈಗ ಆ ಗಿಡಗಳೆಲ್ಲಾ (ನನ್ನ ಈ ಅವಸ್ಥೆಯಲ್ಲಿ) ಬಾಡಿಹೋಗಿವೆ. (ಆದುದರಿಂದ ಇದು ಒಳ್ಳೆಯ ಸಮಯವಲ್ಲ.) ನನ್ನನ್ನು (ಕೃತ್ರಿಮದಿಂದ) ವಂಚಿಸಿ ಹೋಗಿ ಪರಮಪದದಲ್ಲಿ ಸೇರಿಕೊಂಡು ನಿತ್ಯಸೂರೀಶ್ವರನಾಗಿರುವ ಸ್ವಾಮಿಯು ದಿವ್ಯತುಳಸೀಮಾಲಾಲಂಕೃತ ಕಿರೀಟಧಾರಿಯಾಗಿರುವುದರಿಂದ — ಅವನನ್ನು ನೋಡಿ, "ನಿಮಗೆ ಇದು ಉಚಿತವೇ ? ನೀವು ಅವಳನ್ನು ಹೀಗೆ ವಂಚಿಸಿ ಕೈಬಿಡಬಹುದೇ ?" — ಎಂದು ಒಂದು ಮಾತನ್ನು ಹೇಳಿರಿ. (ಆಗ ಈ ಮೊಲ್ಲೆಗಿಡಗಳು ಚೆನ್ನಾಗಿ ಬೆಳೆದು ನಿಮಗೆ ಮಧುಪಾನಕ್ಕೆ ಯೋಗ್ಯವಾಗುವವು.)

(೮೧) ನುಙ್ಗಳ್ಕ್ಕು ಯಾನುರೈಕ್ಕೇನ್ ವಮ್ಮಿನ್
ಯಾನ್‌ವಳರ್‌ತ್ತ ಕಿಳಿಕಾಳ್,
ವೆಙ್ಗಣ್‌ಪುಳ್ಳೂರ್‌ನ್ದು ವನ್ದು ವಿನೈಯೇನ್ನೈ
ನೆಞ್ಜಙ್ಕವರ್‌ನ್ದ,
ಶೆಙ್ಗಣ್ ಕರುಮುಕಿಲೈ ಚ್ಚೆಯ್ಯವಾಯ್
ಚ್ಚೆೞುಮ್‌ಕಱ್ಪಕತ್ತೈ,
ಎಙ್ಗುಚ್ಚೆನ್ಱಾಕಿಲುಮ್ ಕಣ್ಡಿದುವೋ ತಕ್ಕವಾಱೆನ್ಮಿನೇ.

ಪ್ರ|| ಯಾನ್-ನಾನು, ವಳರ್‌ತ್ತ - ಬೆಳೆಸಿದ, ಕಿಳಿಕಾಳ್ - ಗಿಣಿಗಳೇ !, ವಮ್ಮಿನ್-ಬನ್ನಿರಿ. ಯಾನ್-ನಾನು, ನುಙ್ಗಳ್ಕ್ಕು-ನಿಮಗೆ, ಉರೈಕ್ಕೇನ್-ಹೇಳುತ್ತೇನೆ. ವೆಮ್ ಕಣ್-ತೀವ್ರ ದೃಷ್ಟಿಯುಳ್ಳ (ಕ್ರೂರವೀಕ್ಷಣದಿಂದ ಶತ್ರುಧ್ವಂಸಕನಾದ), ಪುಳ್-ಗರುಡನನ್ನು, ಊರ್‌ನ್ದು-ಏರಿ (ನನ್ನ ಸಮೀಪಕ್ಕೆ) ಬಂದು, ವಿನೈಯೇನ್ನೈ-ಪಾಪಿನಿಯಾದ ನನ್ನನ್ನು (ನನ್ನ), ನೆಞ್ಜಮ್ ಕವರ್‌ನ್ದ - ಚಿತ್ತವನ್ನು ಅಪಹರಿಸಿದ, ಶೆಙ್ಗಣ್-ಕೆಂಪಾದ (ಅನುರಾಗವುಳ್ಳ) ಕಣ್ಣುಗಳುಳ್ಳ, ಕರುಮುಕಿಲೈ-ನೀಲಮೇಘಶ್ಯಾಮನನ್ನು, ಶೆಯ್ಯವಾಯ್ - ಬಿಂಬಾಧರವುಳ್ಳ, ಶೆೞುಮ್ ಕಱ್ಪಕತ್ತೈ-ದಿವ್ಯಕಲ್ಪವೃಕ್ಷಸದೃಶನನ್ನು, ಎಙ್ಗುಚ್ಚೆನ್ಱಾಕಿಲುಮ್-(ಪರವ್ಯೂಹವಿಭವಾದಿ ಸ್ಥಲಗಳಲ್ಲಿ) ಎಲ್ಲಿ ಹೋಗಿಯಾದರೂ, ಕಣ್ಡು-ಕಂಡು, ಇದುವೋ-ಇದೋ (ಇವಳನ್ನು ಹೀಗೆ ವಂಚಿಸುವುದೋ), ತಕ್ಕವಾಱು - (ನಿನಗೆ) ಉಚಿತವಾದ ಪ್ರಕಾರವು ಎನ್ಮಿನ್-ಎಂದು ಹೇಳಿರಿ.

( ಸ-ಗಾ-ರ || )—

ಭೋ ಭೋ ಮತ್ಪರಿಪೋಷಿತಾಃ ಪ್ರಿಯಶುಕಾಃ ! ಕಿಞ್ಚಿದ್ವದಾಮ್ಯದ್ಯ ವಃ
ಸಾಕ್ಷಾದೇವ ಹಿ ಸಾದರಂ ಶೃಣುತ ಮಾಂ ಶ್ರೀಮಾನಿಮಾಂ ಪಾಪಿನೀಮ್ ।
ತ್ಯಕ್ತ್ವಾ ಚಿತ್ತಹರೋ ಮಹಾಬ್ಜನಯನಸ್ತಾರ್ಕ್ಷ್ಯಾಧಿರೂಢೋ ಗತ-
ಸ್ತಂ ದೃಷ್ಟ್ವಾ ವದತ ಕ್ವಚಿತ್ ಕಿಮುಚಿತಂ ತೇಽಸ್ತೀತಿ ಸತ್ಕಲ್ಪಕಮ್ ||

ತಾ|| ನಾನು ಬೆಳೆಸಿದ ಗಿಣಿಗಳೇ ! ಬನ್ನಿರಿ. ನಿಮಗೆ ನಾನು ಒಂದು ಹೇಳುತ್ತೇನೆ. ಗರುಡಾರೂಢನಾಗಿ ಬಂದು ನನ್ನ ಮನಸ್ಸನ್ನು ಅಪಹರಿಸಿಕೊಂಡು ಹೋದ ಪದ್ಮಾಕ್ಷನಾದ, ನೀಲಮೇಘಶ್ಯಾಮನಾದ, ಬಿಂಬಾಧರವುಳ್ಳ, ಕಲ್ಪವೃಕ್ಷದಂತೆ ಉದಾರಸ್ವಭಾವನಾದ ಸ್ವಾಮಿಯನ್ನು ಎಲ್ಲಿಹೋಗಿಯಾದರೂ ನೀವು ಕಂಡುಹಿಡಿದು—"ಇದು ನಿನಗೆ ಉಚಿತವೋ ? "—ಎಂದು ಕೇಳಿರಿ.

(೭) ಎನ್ಮಿನ್ನುನೂಲ್ಮಾರ್ವನೆನ್ ಕರುಮ್ಪೆರುಮಾನೆನ್
ಕಣ್ಣನ್, ತನ್
ಮನ್ನು ನೀಳ್ಕೞಲ್ಮೇಲ್ ತಣ್ತುೞಾಯ್ ನಮಕ್ಕನ್ಱಿ
ನಲ್ಕಾನ್,
ಕನ್ನಿಗಳೆನ್ಱುಮ್ಮೈಯಾನ್ ಕಱ್ಪಿಯಾವೈತ್ತ ಮಾಱ್ಱಮ್
ಶೊಲ್ಲಿ,
ಶೆನ್ಱಿಕಳ್ ತೀವಿನೈಯೇನ್ ವಳರ್ತ್ತ ಶಿಱುಪ್ಪೂವೈಕಳೇ

ಪ್ರ|| ತೀವಿನೈಯೇನ್-ಮಹಾಪಾಪವುಳ್ಳ, ನಾನು, ವಳರ್ತ್ತ-ಬೆಳೆಸಿದ, ಶಿಱು ಪೂವೈಕಳೇ – ಚಿಕ್ಕಪೂವೈ ಪಕ್ಷಿಗಳೇ !, ಎನ್-ನನ್ನ, ಮಿನ್ನು ನೂಲ್ ಮಾರ್ವನ್-ಮಿಂಚಿನಂತೆ ಇರುವ ಯಜ್ಞೋಪವೀತವನ್ನು ವಕ್ಷಸ್ಸ್ಥಲದಲ್ಲಿ ಧರಿಸಿರುವವನಾದ, ಎನ್ ಕರುಮ್ ಪೆರುಮಾನ್-ನನ್ನ ನೀಲವರ್ಣವುಳ್ಳ ಸ್ವಾಮಿಯಾದ, ಎನ್ ಕಣ್ಣನ್-ನನಗೆ ಭವ್ಯನಾದ ಕೃಷ್ಣನು, ತನ್-ತನ್ನ, ನೀಳ್ ಕೞಲ್ ಮೇಲ್-ದೀರ್ಘವಾದ (ಆಶ್ರಿತರಿಗೆ ಸುಲಭವಾದ) ಪಾದಗಳಮೇಲೆ, ಮನ್ನು-ಸೇರಿರುವ, ತಣ್ತುೞಾಯ್-ಶೀತಳವಾದ ತುಳಸಿಯನ್ನು, ನಮಕ್ಕನ್ಱಿ – ನನಗೆ ಅಲ್ಲದೆ ಬೇರೆ ಯಾರಿಗೂ, ನಲ್ಕಾನ್-ಕೊಡಲಾರನು, (ಎಂದು ಈ ಪ್ರಕಾರ) ಕನ್ನಿಕಳೆನ್ಱು-(ನೀವು) ಕಲಿತು ಕೊಳ್ಳುವಂತೆ ಶಿಕ್ಷಣೀಯರಾಗಿರಿ ಎಂದು, ಉಮ್ಮೈ-ನಿಮ್ಮನ್ನು, ಯಾನ್-ನಾನು ಕಱ್ಪಿಯಾವೈತ್ತ – ಶಿಕ್ಷಿಸಿ ಕಲಿಸಿದ, ಮಾಱ್ಱಮ್ ಶೊಲ್ಲಿ – (ಮೇಲೆ ಹೇಳಿದ) ಮಾತೆಲ್ಲಾ ಹೇಳಿ, ಶೆನ್ಱಿಕಳ್-ಹೋಗಿರಿ. (ಈ ಮಾತನ್ನು ಅವನಿಗೆ ಹೋಗಿ ಹೇಳಿರಿ.)

( ಸ-ಗಾ-ರ || )—

ಮತ್ಪುಷ್ಟಾಃ ಪ್ರಿಯಪಕ್ಷಿಣಃ ! ಸುರುಚಿರಂ ಯಜ್ಞೋಪವೀತಂ ವಹನ್
ವಕ್ಷಸ್ಯಸ್ತಿ ಮಮ ಪ್ರಭುಃ ಪ್ರಿಯತಮಃ ಕೃಷ್ಣಸ್ಸ್ವಪಾದಸ್ಥಿತಾಮ್ |
ದಿವ್ಯಾಂ ತಾಂ ತುಲಸೀಂ ದದಾತಿ ನ ಹಿ ಮದ್ಭಿನ್ನಾಯ ಪ್ರತೀದಂ ವಚಃ-
ಶಿಕ್ಷಾಂ ಪ್ರಾಪ್ಯ ಮಯಾ ಚ ತತ್ರ ವದತ ಶ್ರೀಶಂ ಪ್ರತಿ ಕ್ವಾಪಿ ತಮ್ ||

ತಾ|| ಪಾಪಿನಿಯಾದ ನಾನು ಬೆಳೆಸಿದ ಪೂವೈಪಕ್ಷಿಗಳೇ ! ವಿದ್ಯುತ್ಸದೃಶ ಯಜ್ಞೋಪವೀತಧರನಾದ, ನೀಲಮೇಘಶ್ಯಾಮನಾದ, ನನ್ನ ಶ್ರೀಕೃಷ್ಣನು ತನ್ನ ಪಾದಗಳಮೇಲಿರುವ ತುಳಸಿಯನ್ನು ನನಗೆ ಅಲ್ಲದೆ ಇನ್ನು ಯಾರಿಗೂ ಕೊಡಲಾರನು. ಈ ಮಾತನ್ನು ನಿಮಗೆ ನಾನು ಹೇಳಿ ಕಲಿಸಿ ಇರುತ್ತೇನೆ. ನೀವು ಹೋಗಿ ಈ ಮಾತನ್ನು ಅವನಿಗೆ ತಿಳಿಸಿರಿ—ಎಂದು ತಾತ್ಪರ್ಯ.

(೭) ಪೂವೈಗಳ್‌ಪೋಲ್ ನಿಱತ್ತನ್
ಪುಣ್ಡರೀಕಙ್ಗಳ್‌ಪೋಲುಮ್ ಕಣ್ಣನ್,
ಯಾವೈಯುಮ್ ಯಾವರುಮಾಯ್
ನಿನ್ಱ ಮಾಯನೆನ್ನಾ಴ಿಪ್ಪಿರಾನ್,
ಮಾವೈವಲ್‌ವಾಯ್‌ಪಿಳನ್ದ ಮದುಶೂದನ್ಱ್ಕು
ಎನ್ ಮಾಱ್ಱಮ್ ಶೊಲ್ಲಿ,
ಪಾವೈಕಳ್ ತೀರ್‌ಕ್ಕಿಱ್ಱಿರೇ ವಿನೈಯಾಟ್ಟಿಯೇನ್ ಪಾಶಱವೇ

ಪ್ರ॥ ಪೂವೈಕಳ್ ಪೋಲ್ ನಿಱತ್ತನ್ – ಪೂವೈ (ಅತಸೀ) ಪುಷ್ಪಗಳಂತೆ ಶರೀರಕಾನ್ತಿಯುಳ್ಳವನಾಗಿಯೂ, ಪುಣ್ಡರೀಕಙ್ಗಳ್ ಪೋಲುಮ್ ಕಣ್ಣನ್–ತಾವರೆಗಳಂತೆ ಕಣ್ಣುಗಳುಳ್ಳವನಾಗಿಯೂ, ಯಾವೈಯುಮ್ ಯಾವರುಮಾಯ್–ಸಕಲ ಅಚೇತನ ವಸ್ತುಗಳಾಗಿಯೂ ಚೇತನವರ್ಗಗಳಾಗಿಯೂ (ಅವುಗಳಿಗೆ ಶರೀರಿಯಾಗಿಯೂ), ನಿನ್ಱ–ನಿಂತಿರುವ, ಮಾಯನ್ – ಆಶ್ಚರ್ಯ ಶಕ್ತಿಯುಕ್ತನಾದ, ಎನ್ ಆ಴ಿಪ್ಪಿರಾನ್–ನನ್ನ ಚಕ್ರಪಾಣಿಯಾಗಿರುವ, ಮಾವೈ–ಕೇಶಿಯೆಂಬ ಕುದುರೆಯನ್ನು, ವಲ್‌ವಾಯ್–ಪ್ರಬಲವಾದ ಬಾಯನ್ನು, ಪಿಳನ್ದ–ಸೀಳಿ ಕೊಂದ, ಮದುಶೂದಱ್ಕು–ಮಧುಸೂದನನಿಗೆ, ಎನ್ ಮಾಱ್ಱಮ್–ನನ್ನ ಮಾತನ್ನು, ಶೊಲ್ಲಿ–ಹೇಳಿ, ಪಾವೈಕಳ್–ಬೊಂಬೆಗಳೇ! (ಪಕ್ಷಿಗಳಂತೆ ಓಡಿಹೋಗದೆ ಇರುವ ನೀವು), ವಿನೈಯಾಟ್ಟಿಯೇನ್ – ಪಾಪಿನಿಯಾದ ನನ್ನ, ಪಾಶಱವು–ಶರೀರಕಾನ್ತಿಯ ಕ್ಷೀಣತೆಯನ್ನು; ತೀರ್‌ಕ್ಕಿಱ್ಱಿರೇ–ಪರಿಹರಿಸಬಲ್ಲಿರೋ ?

( ಸ–ಗಾ–ರ ॥ )—

ಲಾವಣ್ಯಾದತಸೀಪ್ರಭಂ ಚ ವಿಲಸತ್ಪದ್ಮಾಕ್ಷ್ಯಕಂ ಮಾಯಿನಂ
ಮಾಹಾತ್ಮ್ಯಾಚ್ಚಿದಚಿಚ್ಛರೀರಕಮಮುಂ ಶ್ರೀಚಕ್ರಪಾಣಿಂ ಹರಿಮ್ ।
ಕೇಶಿಘ್ನಂ ಮಧುಸೂದನಂ ಪ್ರತಿ ವಚೋ ಯೂಯಂ ಮದೀಯಂ ಗತಾ
ಸ್ತ್ವಯಾ
ಪುತ್ತ್ರಲ್ಯಃ! ಕಿಮು ವಾರಯೇತ ತನುಲಾವಣ್ಯಾದಿನಾಶಂ ಚ ಮೇ ॥

ತಾ॥ ಅತಸೀಗುಚ್ಛಸಚ್ಛಾಯಕಾಯನಾಗಿಯೂ, ಪುಣ್ಡರೀಕಾಕ್ಷನಾಗಿಯೂ, ಮಾಯಾಚೇಷ್ಟಿತನಾಗಿಯೂ, ಚಿದಚಿಚ್ಛರೀರಕನಾಗಿಯೂ, ಚಕ್ರಪಾಣಿಯಾಗಿಯಾಗಿಯೂ, ಕೇಶಿಘ್ನನಾಗಿಯೂ ಇರುವ ಮಧುಸೂದನನನ್ನು ಕುರಿತು ನನ್ನ ಮಾತನ್ನು ಹೇಳಿ—ಎಲೈ ಬೊಂಬೆಗಳಿರಾ! ನೀವಾದರೂ ನನ್ನ ಶರೀರಕಾನ್ತಿಯ ಕ್ಷೀಣತೆಯನ್ನು ಪರಿಹರಿಸಿ ನನಗೆ ಉಪಕಾರಮಾಡುವಿರಾ ?

(೮) ಪಾಶಱವೆಯ್ದಿ ಯಿನ್ನೇ ವಿನೈಯೇನೆನ್ನೈ
ಯೂೞಿನೈವೇನ್,
ಆಶಱುತೂವಿ ವೆಳ್ಳೈಕ್ಕುರುಕೇ ಅರುಳ್‍ಶೆಯ್ದೊರುನಾಳ್,
ಮಾಶಱು ನೀಲಚ್ಚುಡರ್ಮುಡಿ ವಾನವರ್‍ಕೋನೈಕ್ಕಣ್ಡು
ಏಶಱುನುಮ್ಮೈಯಲ್ಲಾಲ್ ಮಱುನೋಕ್ಕಿಲಳ್
ಪೇರ್‍ತ್ತು ಮಱ್ಱೇ

ಪ್ರ॥ ಆಶು ಅಱು—ಗಮನದಲ್ಲಿ ಶಕ್ತಿಸಂಕೋಚವಿಲ್ಲದ, ತೂವಿ-ರೆಕ್ಕೆಗಳುಳ್ಳ, ವೆಳ್ಳೈಕ್ಕುರುಕೇ — ಬಿಳೀ ಕುರುಕುಪಕ್ಷಿಯೇ!, ವಿನೈಯೇನ್-ಪಾಪವುಳ್ಳ ನಾನು, ಪಾಶಱವೆಯ್ದಿ-(ನನ್ನ) ಶರೀರಕಾನ್ತಿಯ ನಾಶವಂ ಹೊಂದಿ, ಇನ್ನೇ-ಹೀಗೆಯೇ, ಎನ್ನೈ ಊೞಿ-ಅನೇಕ ಕಲ್ಪಗಳು, ನೈವೇನ್ — ಶಿಥಿಲೆಯಾಗುವೆನು. ಮಾಶಱು—ನಿರ್ಮಲವಾದ, ನೀಲಚ್ಚುಡರ್‍ಮುಡಿ — ನೀಲಕಾನ್ತಿಯುಳ್ಳ ಕೇಶಪಾಶಯುಕ್ತನಾದ, ವಾನವರ್‍ಕೋನೈ — ನಿತ್ಯಸೂರಿಗಳಿಗೆ ಸ್ವಾಮಿಯಾದವನನ್ನು, ಕಣ್ಡು—ಕಂಡು, ಏಶಱು-ನಿರ್ದೋಷರಾದ, ನುಮ್ಮೈಯಲ್ಲಾಲ್-ನಿಮ್ಮನ್ನು ಬಿಟ್ಟರೆ, ಪೇರ್‍ತ್ತುಮಱ್ಱು-ಬೇರೆ ಯಾವುದನ್ನೂ, (ಇವಳು) ಮಱುನೋಕ್ಕಿಲಳ್-ಪಕ್ಕದಲ್ಲಿ ನೋಡುವವಳಲ್ಲ; (ಎಂದು ಹೇಳಿ) ಒರುನಾಳ್ — ಒಂದುದಿನ, ಅರುಳ್‍ಶೆಯ್-ಕೃಪೆಮಾಡು.

( ಸ ಗಾ ರ ॥ )—

ವೇಗೇನಾಸಮ! ಪಾಣ್ಡುರದ್ವಿಜ! ಮುಹುಃಪಾಪಿನ್ಯಹಂ ಕರ್ಶಿತಾ
ವೈವರ್ಣ್ಯಂ ಗಮಿತಾಽಸ್ಮಿ ಕಲ್ಪಶತಕೈರೇತೈರತೀತೈರಿಮಮ್ |
ಶ್ರೀಶಂ ನಿರ್ಮಲನೀಲಮೌಳಿಮನಘಂ ಸೂರೀನ್ದ್ರನಾಥಂ ಹರಿಂ
ದೃಷ್ಟ್ವಾತ್ರ ತ್ವಂ ವದ ನಾನ್ಯವಸ್ತು ತಮೃತೇ ಪಶ್ಯಾಮಿ ಸೇಯಂ ತ್ವಿತಿ ॥

ತಾ॥ ನಿಸ್ಸಮವೇಗವುಳ್ಳ ಬಿಳೀ ಕುರುಕುಪಕ್ಷಿಯೇ! ಪಾಪಿನಿಯಾದ ನಾನು ಶರೀರಕಾನ್ತಿಯ ನಾಶವಂ ಹೊಂದಿ, ಹೀಗೆಯೇ ಅನೇಕ ಕಲ್ಪಗಳವರೆಗೆ ಶಿಥಿಲೆಯಾಗುತ್ತಿರುವೆನು. ನಿರ್ಮಲವಾದ ನೀಲಕೇಶಪಾಶವುಳ್ಳ ನಿತ್ಯಸೂರೀಶ್ವರನನ್ನು ಕಂಡು—ನೀನು ಒಂದು ಮಾತು ಹೇಳು "ನಿಮ್ಮನ್ನು ಬಿಟ್ಟರೆ ಮತ್ತೊಂದು ವಸ್ತುವನ್ನೂ ಇವಳು ಕಣ್ಣಿನಿಂದ ನೋಡುವವಳಲ್ಲ—" ಎಂದು ಈ ಮಾತನ್ನು ಅವನಿಗೆ ಒಂದುದಿನ ಹೇಳಿ ನನ್ನಲ್ಲಿ ಕೃಪೆಮಾಡು.

(೯) ಪೇರ್ತ್ತು ಮಱ್ಱೋರ್ ಕಳೈಕಣ್
ಪಿನ್ನೈಯಾಟ್ಟಿಯೇನ್ ನಾನೊನ್ರಿಲೇನ್,
ನೀರ್ತ್ತಿರೈಮೇಲುಲವಿ ಯಿರೈತೇರುಮ್
ಪುದಾವಿನಙ್ಗಾಳ್,
ಕಾರ್ತ್ತಿರಳ್ ಮಾಮುಕಿಲ್ ಪೋಲ್ ಕಣ್ಣನ್
ವಿಣ್ಣವರ್ ಕೋನೈಕ್ಕಣ್ಡು,
ವಾರ್ತ್ತೈಕಳ್ ಕೊಣ್ಡರುಳಿ ಯುರೈಯಿರ್
ವೈಕಲ್ ವನ್ದಿರುನ್ದೇ.

ಪ್ರ॥ ನೀರ್ ತಿರೈ ಮೇಲ್-ನೀರಿನ ಅಲೆಗಳಮೇಲೆ, ಉಲವಿ-ಸಂಚರಿಸುತ್ತ, ಇರೈ ತೇರುಮ್-ಆಹಾರಭೂತವಾದ ಜಲಜಂತುಗಳನ್ನು ಹುಡುಕಿ ಆರಿಸಿಕೊಳ್ಳುವ, ಪುದಾ ಇನಙ್ಗಾಳ್-(ನಾರೈ-ಎಂಬ) ದೊಡ್ಡಪಕ್ಷಿಗಳ ಸಮೂಹಗಳೇ, ಪಿನ್ನೈಯಾಟ್ಟಿ ಯೇನ್ ನಾನ್-ಪಾಪಿನಿಯಾದ ನಾನು, ಪೇರ್ತ್ತು-(ನಿಮ್ಮನ್ನು) ಬಿಟ್ಟು, ಮಱ್ಱೊ ಓರ್-ಬೇರೆ ಅದ್ವಿತೀಯವಾದ, ಕಳೈಕಣ್-ಆಶ್ರಯವಸ್ತು, ಒನ್ರು-ಒಂದನ್ನೂ, ಇಲೇನ್-ಉಳ್ಳವಳಲ್ಲ, ಕಾರ್-ವರ್ಷಕಾಲದಲ್ಲಿ, ತಿರಳ್-ಸಾನ್ದ್ರವಾದ, ಮಾಮು ಕಿಲ್ ಪೋಲ್-ಮಹಾ ಮೇಘದಂತೆ, ಕಣ್ಣನ್-ಆಶ್ರಿತಸುಲಭನಾದ ಕೃಷ್ಣನನ್ನು, ವಿಣ್ಣವರ್ ಕೋನೈ-ನಿತ್ಯಸೂರೀಶ್ವರನನ್ನು, ಕಣ್ಡು-ಕಂಡು, ವಾರ್ತ್ತೈಕಳ್ ಕೊಣ್ಡು-(ಅವನ) ಮಾತುಗಳನ್ನು ತಂದು, ಅರುಳಿ-ಕೃಪೆಮಾಡಿ, ವನ್ದಿರುನ್ದು-ಬಂದು ಇದ್ದು, ವೈಕಲ್-ನಿತ್ಯವಾಗಲೂ, ಉರೈಯಿರ್-ಹೇಳಿರಿ.

( ಸ-ಗಾ-ರ ॥ )—

ವೀಚೀನಾಮುಪರಿಪ್ಲವೈರ್ಭ್ಯದಶನಂ ಯೂಯಂ ಬಲಾಕಾಗಣಾಃ!
ಸಞ್ಚಾರೇಷು ವಿಚಿತ್ಯ ತುಷ್ಟಹೃದಯಾ ಯುಷ್ಮಾನ್ ವಿನಾಽನ್ಯನ್ನ ಮೇ ।
ಪಾಪಿನ್ಯಾಶ್ಶರಣಂ ತತೋಽಸಿತಪಯೋದಾಭಂ ಚ ಕೃಷ್ಣಂ ಹರಿಂ
ತಂ ಸೂರೀನ್ದ್ರಪತಿಂ ವಿಲೋಕ್ಯ ವಚನಂ ತಸ್ಯಾನಿಶಂ ಬ್ರೂತ ಮೇ ॥

ತಾ॥ ನೀರಿನ ಅಲೆಗಳಮೇಲೆ ಆಹಾರಾರ್ಥವಾಗಿ ಸಂಚರಿಸುವ ದೊಡ್ಡ ನಾರೈ ಪಕ್ಷಿಗಳ ಸಮೂಹಗಳೇ! ಪಾಪಿನಿಯಾದ ನಾನು ನಿಮ್ಮನ್ನು ಬಿಟ್ಟು ಬೇರೆ ಯಾರನ್ನೂ ಆಶ್ರಯಿಸಿ ಇಲ್ಲ. (ನೀವೇ ನನಗೆ ಉಪಕಾರ ಮಾಡಬೇಕು) ನೀಲ

ಮೇಘಶ್ಯಾಮನಾಗಿಯೂ, ಆಶ್ರಿತ ಸುಲಭನಾದ ಕೃಷ್ಣನಾಗಿಯೂ ಇರುವ ನಿತ್ಯ ಸೂರೀಶ್ವರನನ್ನು ಕಂಡು, ಅವನ ಮಾತುಗಳನ್ನು ನನಗೆ ತಂದು ಕೃಪೆಮಾಡಿ ಯಾವಾಗಲೂ ನನ್ನ ಸಮೀಪದಲ್ಲಿದ್ದು ಹೇಳುತ್ತೀರಿ.

(೧೦) ಪನ್ದಿರುನ್ದುಮ್ಮುಡೈಯ ಮಣಿಚ್ಚೇವಲುಮ್
ನೀರುಮೆಲ್ಲಾಮ್,
ಅನ್ತರಮೊನ್ತಿಮಿನ್ತಿ ಯಲರ್ಮೇಲಶೈಯುಮನ್ನಙ್ಗಾಳ್,
ಎನ್ತಿರುಮಾರ್ವರ್ಕ್ಕೆನ್ನೈ ಯಿನ್ನವಾಱಿವಳ್ ಕಣ್ಣೆನ್ನು
ಮನ್ದಿರತ್ತೊನ್ರುಣರ್ತ್ತಿ ಯುರೈಯಿರ್
ಮಱುಮಾಱ್ಱಙ್ಗಳೇ.

ಪ್ರ॥ ಪನ್ದಿರುನ್ದು-ಒಂದು ಸ್ಥಿರವಾಗಿ ಇದ್ದು, ಉಮ್ಮುಡೈಯ-ನಿಮ್ಮ, ಮಣಿ-ಶ್ಲಾಘ್ಯವಾದ, ಶೇವಲುಮ್-ಸ್ತ್ರೀಪಕ್ಷಿಗಳೂ (ಕಾನ್ತೆಗಳೂ), ನೀರುಮ್-ನೀವೂ, ಎಲ್ಲಾಮ್ - ಮತ್ತೂ ಎಲ್ಲಾ ಬಂಧುವರ್ಗಗಳೂ, ಒನುಮ್ ಅನ್ತರಮಿನ್ರಿ-(ಸಂಶ್ಲೇಷಕ್ಕೆ) ಒಂದು ಅಡ್ಡಿಯೂ ಇಲ್ಲದೆ, ಅಲರ್ಮೇಲ್ - ಪುಷ್ಪಗಳಮೇಲೆ, ಅಶೈಯುಮ್ - ಆಡುತ್ತಿರುವ, ಅನ್ನಙ್ಗಾಳ್ - ಹಂಸಗಳಿರಾ!, ಎನ್-ನಮ್ಮ ತಿರುಮಾರ್ವರ್ಕ್ಕು-ಲಕ್ಷ್ಮಿಯನ್ನು ವಕ್ಷಸ್ಸ್ಥಳದಲ್ಲಿ ಧರಿಸಿರುವ ಸ್ವಾಮಿಗೆ, ಎನ್ನೈ-ನನ್ನನ್ನು ಕುರಿತು, ಇವಳ್-ಇವಳು, ಇನ್ನವಾಱು - ಈ ಅವಸ್ಥೆಯನ್ನು ಹೊಂದಿದವಳು, ಕಾಣ್ಮಿನ್-ನೋಡಿರಿ, ಎನ್ನು-ಎಂದು, ಮನ್ದಿರತ್ತು-ಅವರಿಬ್ಬರೂ ಇರುವ ಅನ್ತಃಪುರದಲ್ಲಿ (ಏಕಾನ್ತಸ್ಥಳದಲ್ಲಿ), ಒನ್ರು ಉಣರ್ತ್ತಿ-ಒಂದು ಮಾತನ್ನು ತಿಳಿಸಿ, ಮಱುಮಾಱ್ಱಙ್ಗಳ್ - (ಅವನ) ಪ್ರತ್ಯುತ್ತರಗಳನ್ನು, ಉರೈಯಿರ್-(ನನಗೆ) ಹೇಳಿರಿ.

( ಸ-ಗಾ-ರ ॥ )—

ಯೂಯಂ ಹಂಸಗಣಾಃ! ಕಳತ್ರಸಹಿತಾಃ ಪುಷ್ಪೇಷು ಭೋಗಾಶ್ರಯಾಃ
ಪ್ರಾಪ್ಯ ಸ್ಥೈರ್ಯಮಿಮಾಂ ಚ ಮಾಂ ಸ್ಮರವಶಾಂ ತಸ್ಮೈ ನಿವೇದ್ಯ ಸ್ವಯಮ್।
ಶ್ರೀಕಾನ್ತಾಯ ರಮಾಂ ನಿಜೋರಸಿ ಸದಾ ಬಿಭ್ರತ್ಸ್ವರೂಪಾಂ ತತ್-
ಸೂಕ್ತಿರ್ಮೇ ಕಥಿತಾ ಪುನಃ ಸ್ಮರತಯಾ ಭೋಕ್ತ್ರೇಕಾವಾಸಸ್ಥಲಾತ್॥

ತಾ|| ಎಲೈ ಹಂಸಗಳಿರಾ! ನೀವು ನಿಮ್ಮ ಸ್ತ್ರೀಶಕ್ತಿಗಳೊಡನೆ ಯಥೇಚ್ಛವಾಗಿ ಪುಷ್ಪಗಳಮೇಲೆ ಕುಳಿತು ವಿಹಾರಮಾಡುತ್ತಿದ್ದೀರಿ. ನನ್ನ ಈ ಅವಸ್ಥೆಯನ್ನು ಆ ಲಕ್ಷ್ಮೀಪತಿಯಾದ ಸ್ವಾಮಿಗೆ ಏಕಾಂತದಲ್ಲಿ ತಿಳಿಸಿ, ಅವನ ಪ್ರತ್ಯುತ್ತರಗಳನು ತಂದು ನನಗೆ ಹೇಳಿರಿ.

(೧೧) ಮಾಱ್ಱಙ್ಗಳಾಯ್ನ್ದುಕೊಣ್ಡು
ಮದುಶೂದಪಿರಾನಡಿಮೇಲ್,
ನಾಱ್ಱಙ್ಗೊಳ್ ಪೂಮ್ಪೊೞಿಲ್ ಶೂೞ್
ಕುರುಕೂರ್ ಚ್ಚಡಕೋಪನ್ ಶೊನ್ನ,
ತೋಱ್ಱಙ್ಗಳಾಯಿರತ್ತುಳ್ಳಿವೈಯುಮೋರುಪತ್ತುಮ್
ವಲ್ಲಾರ್,
ಊಱ್ಱಿನ್ಕಣ್ ನುಣ್ಮಣಲ್ಪೋಲುರುಕಾನಿಱ್ಪರ್
ನೀರಾಯೇ.

ಪ್ರ|| ಮಾಱ್ಱಙ್ಗಳ್ – ವಿಲಕ್ಷಣವಾದ ಶಬ್ದಗಳನ್ನು, ಆಯ್ನ್ದುಕೊಣ್ಡು – ಆರಿಸಿಕೊಂಡು, ಮದುಶೂದ ಪಿರಾನ್ – ಮಧುಸೂದನನಾದ ಸ್ವಾಮಿಯ, ಅಡಿಮೇಲ್ – ಪಾದಗಳಮೇಲೆ, ನಾಱ್ಱಙ್ಗೊಳ್ – ಪರಿಮಳಭರಿತವಾದ, ಪೂಮ್ ಪೊೞಿಲ್ – ಪುಷ್ಪಗಳುಳ್ಳ ಉದ್ಯಾನಗಳಿಂದ, ಶೂೞ್ – ಪರಿವೃತವಾದ, ಕುರುಕೂರ್ – ಕುರುಕಾಪುರಿಯ, ಶಡಕೋಪನ್ – ಶಠಾರಿಮುನಿಯು, ಶೊನ್ನ – (ಸ್ತೋತ್ರರೂಪವಾಗಿ) ರಚಿಸಿದ, ತೋಱ್ಱಙ್ಗಳ್ – (ಭಗವದವತಾರಗಳಂತೆ) ವೇದಾವಿರ್ಭಾವರೂಪವಾದ, ಆಯಿರತ್ತುಳ್ – ಸಹಸ್ರಪದ್ಯಾವಳಿಯಲ್ಲಿ, ಒರು – ಅದ್ವಿತೀಯವಾದ, ಇವೈಯುಮ್ ಪತ್ತುಮ್ – ಈ ದಶಕವನ್ನು, ವಲ್ಲಾರ್ – ಬಲ್ಲವರು, ಊಱ್ಱಿನ್ಕಣ್ (ನದೀತೀರದ) ಒರತೆ ಪ್ರದೇಶದಲ್ಲಿರುವ, ನುಣ್ – ಅತಿಸೂಕ್ಷ್ಮವಾದ, ಮಣಲ್ ಪೋಲ್ – ಮರಳಿನ ಹಾಗೆ, ನೀರಾಯ್ – ನೀರಾಗಿ (ದ್ರವೀಭೂತರಾಗಿ), ಉರುಕಾನಿಱ್ಪರ್ – ಆರ್ದ್ರಭಾವವುಳ್ಳವರಾಗುವರು

( ಸ–ಗಾ–ರ || )—
ದಿವ್ಯಾಂ ಸೂಕ್ತಿತತಿಂ ವಿಚಿತ್ಯ ಸರಸಾಂ ಸೂರಿಶ್ಶಠಾರಿಃ ಕವಿ–
ಸ್ಸ್ತೋತುಂ ತಂ ಮಧುಸೂದನಂ ಪ್ರಭುಮಹೋ! ಸಾಹಸ್ರಪದ್ಯಾವಳಿಮ್|
ಆಹ ಶ್ರೀಕುರುಕಾಪುರಪ್ರಭುರಸೌ ಯೇ ಯೇ ಪಠನ್ತಿ ಸ್ವಯಂ
ತತ್ರೇದಂ ದಶಕಂ ತು ತೇ ಕಿಲ ಭವನ್ತ್ಯೇವ ದ್ರವಾತ್ಮಾಶಯಾಃ ||

ತಾ|| ಶ್ರೀ ಮಧುಸೂದನನ ಪಾದಾರವಿನ್ದಗಳನ್ನು ಕುರಿತು ಸ್ತೋತ್ರರೂಪವಾಗಿ ವಿಲಕ್ಷಣ ಶಬ್ದಗಳಿಂದ ಶ್ರೀ ಕುರುಕಾಪುರಿಯ ಶಠಾರಿಮುನಿಯು ವೇದಾರ್ಥವರೂಪವಾಗಿ ರಚಿಸಿದ ಸಹಸ್ರಪದ್ಯಮಾಲೆಯೊಳು ಈ ದಶಕವನ್ನು ಬಲ್ಲವರು ದ್ರವೀಭೂತ ಸ್ವಭಾವರಾಗುವರು.

( ದ್ರ-ಉ-ಸಂ || )—

ಅಸ್ಯೈವಮಾತ್ಮಫಲದಾನವಿಲಮ್ಬವನ್ತ-
ಮಾಲೋಕ್ಯ ಶೌರಿಮಥ ಯತ್ರ ಚ ಕುತ್ರ ಚಾಪಿ |
ಆವೇದ್ಯ ಸಕ್ತಿಮಧೀನವಿಭೂತಿಯುಗ್ಮಾಃ
ಸ್ವಾತ್ಮೇತ್ಯಯಾಚತ ಸತೋ ಮುನಿರಷ್ಟಮೇನ ||

( ದ್ರ-ಉ-ಸಾ-ರ || )—

ಲೋಕಸ್ರಷ್ಟೃತ್ವಶಕ್ತ್ಯಾದ್ಯಧಿಕಸುಭಗತಯಾ ಜಿಷ್ಣುಸಾರಥ್ಯಯೋಗಾತ್
ಸ್ವರ್ಗಾದ್ಯುಚ್ಛ್ರೇಶಭಾವಾದ್ಗರುಡರಥತಯಾ ಸ್ವಾಶ್ರಿತೇ ಪಕ್ಷಪಾತಾತ್ |
ಕಾನ್ತ್ಯಾದ್ಯೈಃ ಸಾಮ್ರಾಜ್ಯಯೋಗಾದವತರಣದಶಾಸ್ಪಷ್ಟಸಾಮ್ಯಾತ್ತತ್ತ್ವ
ತ್ರಯ್ಯಾಯತ್ತಸ್ವಭೂತಿದ್ವಯಮಥ ಕಥಯಾಮಾಸ ದೇವಂ ಶಠಾರಿಃ ||

(ಈ ಅಷ್ಟಮದಶಕದ ಸಾರಾಂಶ)—

ಈ ಎಂಟನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ನಾಯಿಕಾವಸ್ಥೆಯಂ ಹೊಂದಿ—ನಾಯಿಕೆಯು ಪಕ್ಷಿಗಣಗಳನ್ನು ತನ್ನ ನಾಯಕನಾದ ಸ್ವಾಮಿಯನ್ನು ಕುರಿತು ಪ್ರೇರಿಸಿ ತನ್ನ ದುರ್ದಶೆಯನ್ನು ಅವನಿಗೆ ತಿಳಿಸಿ ಅವನ ಪ್ರತ್ಯುತ್ತರಗಳನ್ನು ತರುವಂತೆ ಪ್ರಾರ್ಥಿಸುವುದಾಗಿ—ವರ್ಣಿಸಿ ಇರುತ್ತಾರೆ.

———:❖:———

ಶ್ರೀಃ

# ಷಷ್ಠ ಶತಕದಲ್ಲಿ—ನವಮದಶಕ.

(ನೀರಾಯ್ ನಿಲನಾಯ್—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಅತ್ಯನ್ತ ದುಃಖಾರ್ತರಾಗಿ ಭಗವನ್ತನನ್ನು, ಪರಮಪದದಿಂದ ಇಲ್ಲಿಗೆ ಬರಬೇಕೆಂದು ಕರೆಯುತ್ತಾರೆ.)

---

(೧) ನೀರಾಯ್ ನಿಲನಾಯ್ ತ್ತೀಯಾಯ್ ಕಾಲಾಯ್
ನೆಡುವಾನಾಯ್,
ಶೀರಾರ್ ಶುಡರ್ಗಳಿರಣ್ಡಾಯ್ ಚ್ಚಿವನಾಯಯನಾನಾಯ್,
ಕೂರಾರಾೞಿವೆಣ್ಶಙ್ಗೇನ್ದಿ ಕ್ಕೊಡಿಯೇನ್ಪಾಲ್ ವಾರಾಯ್
ಒರುನಾಳ್ ಮಣ್ಣುಮ್ ವಿಣ್ಣುಮ್ ಮಕಿೞವೇ.

ಪ್ರ॥ ನೀರಾಯ್ – ಜಲವಾಗಿಯೂ, ನಿಲನಾಯ್ – ಭೂಮಿಯಾಗಿಯೂ, ತೀಯಾಯ್-ಅಗ್ನಿಯಾಗಿಯೂ, ಕಾಲಾಯ್-ವಾಯುವಾಗಿಯೂ, ನೆಡುವಾನಾಯ್-ಮಹಾವಕಾಶವುಳ್ಳ ಆಕಾಶವಾಗಿಯೂ, (ಈಪ್ರಕಾರ ಪಂಚಭೂತಗಳಲ್ಲೂ ಸಮಷ್ಟಿ ಸೃಷ್ಟಿಯಲ್ಲಿ ಅನುಪ್ರವಿಷ್ಟನಾಗಿ ತದಾತ್ಮಕನಾಗಿಯೂ), ಶೀರಾರ್—ತೇಜೋವಿಶಿಷ್ಟರಾಗಿ (ವ್ಯಷ್ಟಿಸೃಷ್ಟಿಯಲ್ಲಿ ಮುಖ್ಯರಾದ) ಮಾಹಾತ್ಮ್ಯಪೂರ್ಣರಾದ, ಇರಣ್ಡು ಶುಡರಾಯ್—ಚನ್ದ್ರಸೂರ್ಯರೂ ಆಗಿ, ಶಿವನಾಯ್ – ಸಂಹಾರಕರ್ತನಾದ ರುದ್ರನಾಗಿಯೂ, ಅಯನಾನಾಯ್—ವ್ಯಷ್ಟಿಸೃಷ್ಟಿಕರ್ತನಾದ ಬ್ರಹ್ಮನಾಗಿಯೂ ಹೀಗೆ ಎಲ್ಲರಿಗೂ ಅನ್ತರಾತ್ಮನಾದವನೇ!, ಕೂರಾರ್—ತೀಕ್ಷ್ಣತೆಯುಳ್ಳ, ಆೞಿ—ಚಕ್ರವನ್ನೂ, ವೆಣ್—ಧವಳವರ್ಣವುಳ್ಳ, ಶಙ್ಗು—ಶಙ್ಖವನ್ನೂ, ಏನ್ದಿ—ಧರಿಸಿ, ಮಣ್ಣುಮ್—ಭೂಲೋಕವೂ (ಲೀಲಾವಿಭೂತಿಯೂ), ವಿಣ್ಣುಮ್—ನಿತ್ಯವಿಭೂತಿಯೂ (ಪರಮಪದವೂ), ಮಕಿೞ—ಸನ್ತೋಷಿಸಿ ವಿಸ್ಮಯಪಡುವಂತೆ, ಕೊಡಿಯೇನ್ಪಾಲ್—ಕ್ರೂರಹೃದಯನಾದ ನನ್ನ ವಿಷಯದಲ್ಲಿ, ಒರುನಾಳ್—ಒಂದು ದಿನವಾದರೂ, ವಾರಾಯ್—(ನೀನು ಕೃಪೆಮಾಡಿ) ಬರಬೇಕು.

ಸ-ಗಾ-ರ || )—

ನೀರಾವನೀದಹನವಾಯುನಭೋಮಯಸ್ತ್ವಂ
ಮುಖ್ಯೋಜ್ಜ್ವಲೌ ಶಶಿರವೀ ಚ ಸಮಸ್ತಸೃಷ್ಟೌ |
ರುದ್ರೋಽಪ್ಯಜೋಽಪಿ ಕರತಸ್ತವ ದೀಪ್ರಚಕ್ರಂ
ಧೃತ್ವಾ ಚ ಶಙ್ಖಮಿಹ ಸರ್ವನತೋಽಭ್ಯುಪೇಹಿ ||

ತಾ|| ಪಂಚಭೂತಗಳಿಗೂ ಚನ್ದ್ರಸೂರ್ಯರಿಗೂ ಬ್ರಹ್ಮರುದ್ರರಿಗೂ ಅನ್ತರ್ಯಾಮಿಯಾದವನೇ! ನೀನು ಶಂಖಚಕ್ರಧಾರಿಯಾಗಿ ಈ ಲೀಲಾವಿಭೂತಿಯೂ ನಿತ್ಯವಿಭೂತಿಯೂ ಆಶ್ಚರ್ಯದಿಂದ ಸನ್ತೋಷಿಸುವಂತೆ ನನ್ನ ಸಮೀಪಕ್ಕೆ ಒಂದು ದಿನ ಕೃಪೆಮಾಡಿ ಬರಬೇಕು.

(೨) ಮಣ್ಣುಮ್ ವಿಣ್ಣುಮ್ ಮಕಿೞಕ್ಕುಱಳಾಯ್ ವಲಙ್ಕಾಟ್ಟಿ,
ಮಣ್ಣುಮ್ ವಿಣ್ಣುಮ್ ಕೊಣ್ಡ ಮಾಯವಮ್ಮಾನೇ,
ನಣ್ಣಿಯುನ್ನೈ ನಾನ್ ಕಣ್ಡುಕನ್ದು ಕೂತ್ತಾಡ,
ನಣ್ಣಿಯೊರುನಾಳ್ ಞಾಲತ್ತೂಡೇ ನಡವಾಯೇ.

ಪ್ರ|| ಮಣ್ಣುಮ್-ಭೂಲೋಕವೂ, ವಿಣ್ಣುಮ್-ಊರ್ಧ್ವಲೋಕವೂ, ಮಕಿೞ-ಸನ್ತೋಷಿಸುವಂತೆ, ಕುಱಳಾಯ್-ವಾಮನನಾಗಿ, ವಲಮ್-(ತ್ರಿವಿಕ್ರಮನಾಗಿ ಬೆಳೆಯುವಂತೆ) ಅದ್ಭುತವಾದ ಪರಾಕ್ರಮವನ್ನು, ಕಾಟ್ಟಿ-ಪ್ರಕಾಶಪಡಿಸಿ, ಮಣ್ಣುಮ್ ವಿಣ್ಣುಮ್-ಭೂಲೋಕವನ್ನೂ ಊರ್ಧ್ವಲೋಕವನ್ನೂ, ಕೊಣ್ಡ-ಅಳೆದುಕೊಂಡ, ಮಾಯ ಅಮ್ಮಾನೇ-ಆಶ್ಚರ್ಯಚೇಷ್ಟಿತವುಳ್ಳ ಸ್ವಾಮಿಯೇ! ಉನ್ನೈ — (ಅನ್ತಹ ದಿವ್ಯಸೌನ್ದರ್ಯವುಳ್ಳ) ನಿನ್ನನ್ನು, ನಾನ್-(ಚಪಲನಾದ) ನಾನು, ನಣ್ಣಿ-ಸಮೀಪಿಸಿ, ಕಣ್ಡು-ದರ್ಶನಮಾಡಿ, ಉಕನ್ದು-ಅತ್ಯನ್ತ ಸನ್ತುಷ್ಟನಾಗಿ, ಕೂತ್ತಾಡ-ನರ್ತನ ಮಾಡುವಂತೆ, ನಣ್ಣಿ — (ನೀನು ನನ್ನ) ಸಮೀಪಕ್ಕೆ, ಒರುನಾಳ್-ಒಂದುದಿನ, ಞಾಲತ್ತೂಡೇ-ಭೂಮಿಯಲ್ಲಿ, ನಡವಾಯ್-ನಡೆದು ಬರಬೇಕು.

( ಸ-ಗಾ-ರ || )—

ದ್ಯಾವಾಪೃಥಿವ್ಯಭಿಮತೋಽಪಿ ಚ ವಾಮನಸ್ತ್ವಂ
ಭೂಮ್ನಾಽವನೀಂ ದಿವಮಪಿ ಸ್ವಯಮೇವ ಗೃಹ್ಣನ್ |
ಮಾಯಿನ್ ! ಪ್ರಭೋ ! ಭುವಿ ತು ಸಞ್ಚರ ಜಾತು ವಿಷ್ಣೋ !
ದೃಷ್ಟ್ವಾ ಯದಾ ತು ಮುದಿತೋಽಹಮಿಹಾಸ್ಮಿ ನೃತ್ಯನ್ ||

ತಾ॥ ಭೂಲೋಕವೂ ಊರ್ಧ್ವಲೋಕವೂ ಸನ್ತೋಷಿಸುವಂತೆ ವಾಮನ ವೇಷವನ್ನು ಧರಿಸಿ ಕ್ರಮೇಣ ತ್ರಿವಿಕ್ರಮನಾಗಿ ಬೆಳೆದು ಸಕಲಲೋಕಗಳನ್ನೂ ಅಳೆದುಕೊಂಡ ಮಾಯಾಮೂರ್ತಿಯಾದ ಸ್ವಾಮಿಯೇ! ನಿನ್ನನ್ನು (ಆ ದಿವ್ಯಸೌನ್ದರ್ಯದೊಡನೆ) ನೋಡಬೇಕೆಂಬ ಆಶೆಯುಳ್ಳ ನಾನು ನಿನ್ನ ದರ್ಶನವಂ ಪಡೆದು ಅತ್ಯನ್ತ ಸಂತುಷ್ಟನಾಗಿ ನರ್ತನಮಾಡುವಂತೆ, ನೀನು ನನ್ನ ಸಮೀಪಕ್ಕೆ ಒಂದು ದಿನ ಈ ಭೂಮಿಯಲ್ಲಿ ನಡೆದು ಬರಬೇಕು.

(೩) ಞಾಲತ್ತೂಡೇ ನಡನ್ದುಂ ನಿನ್ರುಮ್ ಕಿಡನ್ದಿರುನ್ದುಮ್,
ಶಾಲಪ್ಪಲನಾಳುಂಕನ್ರೂಉಯಿರ್‌ಕಳ್ ಕಾಪ್ಪಾನೇ,
ಕೋಲತ್ತಿರುಮಾಮಕಳೋಡುನ್ನೈ ಕ್ಕೂಡಾದೇ,
ಶಾಲಪ್ಪಲನಾಳಡಿಯೇನಿನ್ನುಮ್ ತಳರ್‌ವೇನೋ.

ಪ್ರ॥ ಉಕನ್ದೋಱುಂ – ಪ್ರತಿಯುಗದಲ್ಲೂ, ಞಾಲತ್ತೂಡೇ – ಭೂಮಿಯಲ್ಲಿ ಅವತರಿಸಿ, ನಡನ್ದುಮ್ - ನಡೆದೂ, ನಿನ್ರುಮ್–ನಿಂತೂ, ಕಿಡನ್ದುಮ್–ಶಯನ ಮಾಡಿಯೂ, ಇರುನ್ದುಮ್–ಕುಳಿತು ಇದ್ದೂ, ಶಾಲಪ್ಪಲನಾಳ್–ಅನೇಕ ಕಾಲದ ವರೆಗೆ, ಉಯಿರ್‌ಕಳ್–ಪ್ರಾಣಿಗಳನ್ನು, ಕಾಪ್ಪಾನೇ - ರಕ್ಷಿಸಿಕೊಂಡು ಹೋಗುವವನೇ!, ಕೋಲ-(ನಿನಗೆ ತಕ್ಕಂತೆ) ಸುನ್ದರವಾದ ರೂಪವನ್ನು ಧರಿಸುವ, ತಿರುಮಾಮಕಳೋಡು – ಲಕ್ಷ್ಮೀದೇವಿಯೊಡನೆ, ಉನ್ನೈ - ನಿನ್ನನ್ನು, ಕೂಡಾದೇ– ಆಶ್ರಯಿಸಿ ಅನುಭವಿಸದೇ, ಶಾಲಪ್ಪಲನಾಳ್–ಅನೇಕ ಕಾಲದವರೆಗೆ, ಅಡಿಯೇನ್– ದಾಸಭೂತನಾದ ನಾನು, ಇನ್ನುಮ್ – (ಹೀಗೆ ನಿನ್ನ ಮಹಿಮೆಯನ್ನು ತಿಳಿದು) ಇನ್ನು ಮೇಲೂ, ತಳರ್‌ವೇನೋ–ದುಃಖದಿಂದ ಶ್ರಮಪಡುವೆನೋ ?

( ಸ-ಗಾ-ರ ॥ )—

ಭೂಮ್ಯಾಂ ಕಿಲ ಪ್ರತಿಯುಗಂ ಚ ಚರನ್ ಶಯಾನ-
ಸ್ತಿಷ್ಠನ್ ಕ್ರಮಾದುಪವಿಶನ್ನಪಿ ಸರ್ವಲೋಕಾನ್ ।
ತ್ವಂ ಪಾಲಯನ್ನಸಿ ಚಿರಂ ರಮಯಾ ಸಮೇತಂ
ತ್ವಾಮಪ್ಯನಾಶ್ರಿತ ಇಹಾಸ್ಮಿ ಕಿಮದ್ಯ ಖಿನ್ನಃ? ॥

ತಾ॥ ಪ್ರತಿಯುಗದಲ್ಲೂ ಅವತರಿಸಿ ಭೂಮಿಯಲ್ಲಿ ಸಂಚರಿಸುತ್ತ ನಡೆದೂ, ನಿಂತೂ, ಶಯನಮಾಡಿಯೂ, ಕುಳಿತು ಇದ್ದೂ—ಅನೇಕ ಕಾಲದವರೆಗೆ ಪ್ರಾಣಿಗಳನ್ನು ರಕ್ಷಿಸುವ ಸ್ವಭಾವವುಳ್ಳವನೇ! ನಿನಗೆ ಅನುರೂಪವಾದ ಸುನ್ದರ ರೂಪ

ವುಳ್ಳ ಲಕ್ಷ್ಮೀದೇವಿಯೊಡನೆ ನಿನ್ನನ್ನು ಸೇವಿಸಿ ಆನನ್ದಾನುಭವವಂ ಹೊಂದದೆ, ನಾನು ಇನ್ನುಮೇಲೂ ಬಹುಕಾಲ ಖಿನ್ನನಾಗಿ ಶ್ರಮಪಡುವೆನೋ! (ನೀನು ಕೃಪೆ ಮಾಡಿ ನನಗೆ ನಿನ್ನ ಸೇವೆಯನ್ನು ಕೊಟ್ಟು ರಕ್ಷಿಸಬೇಕೆಂದು ಭಾವವು.)

(೪) ತಳರ್ನ್ದುಮ್ ಮುಱಿನ್ದುಮ್ ಶಕಡವಶುರರುಡಲ್ ವೇಱಾ
ಪಿಳನ್ದು ವೀಯತ್ತಿರುಕ್ಕಾಲಾಣ್ಡ ಪೆರುಮಾನೇ,
ಕಿಳರ್ನ್ದು ಪಿರಮನ್ ಶಿವನಿನ್ದಿರನ್ ವಿಣ್ಣವರ್ ಶೂೞ
ವಿಳಙ್ಗ ವೊರುನಾಳ್ ಕಾಣವಾರಾಯ್ ವಿಣ್ಮಿಸಾದೇ.

ಪ್ರ॥ ಶಕಡವಶುರರ್--ಶಕಟಾಸುರನ, ಉಡಲ್–ಶರೀರವು, ತಳರ್ನ್ದುಮ್–ಶಿಥಿಲವಾಗಿಯೂ, ಮುಱಿನ್ದುಮ್–ಭಗ್ನವಾಗಿಯೂ, ವೇಱಾ-ಬೇರೆಬೇರೆಯಾಗುವಂತೆ, ಪಿಳನ್ದುವೀಯ – ಸೀಳಿಹೋಗಿ ನಾಶಹೊಂದುವಂತೆ, ತಿರುಕ್ಕಾಲ್ ಆಣ್ಡ–ಪಾದವನ್ನು ಪ್ರಯೋಗಿಸಿದ, ಪೆರುಮಾನೇ–ಸ್ವಾಮಿಯೇ!, ಕಿಳರ್ನ್ದು – ಸಾದರವಾಗಿ ಬಂದು, ಪಿರಮನ್–ಬ್ರಹ್ಮನೂ, ಶಿವನ್–ರುದ್ರನೂ, ಇನ್ದಿರನ್ – ಇನ್ದ್ರನೂ, ವಿಣ್ಣವರ್– ಇತರ ದೇವತೆಗಳೂ, ಶೂೞ – ಸುತ್ತ ಸೇವಿಸುತ್ತಿರಲು, ವಿಳಙ್ಗ–ದಿವ್ಯತೇಜಃಪ್ರಕಾಶವಾಗುವಂತೆ (ಗಜೇನ್ದ್ರನಿಗೋಸ್ಕರ ಬಂದು ದರ್ಶನವನ್ನು ಕೊಟ್ಟು ರಕ್ಷಿಸಿದಂತೆ), ಒರುನಾಳ್ – ಒಂದುದಿನ, ವಿಣ್‌ವಿಸಾದು – ಆಕಾಶದಲ್ಲಿ ಮೇಲುಗಡೆ, ಕಾಣ–ಕಣ್ಣಿಗೆ ತೋರುವಂತೆ, ವಾರಾಯ್–(ನೀನು) ಬರಬೇಕು.

( ಸ–ಗ್ರಾ–ರ ॥ )—

ಭಿತ್ವಾ ತನುಂ ಚ ಶಕಟಾಸುರರೂಪಿಣಸ್ತ್ವಂ
ಪಾದೇನ ಭಾಸಿ ಪರಮಃ ಪ್ರಭುರಚ್ಯುತೋ ನಃ ।
ಬ್ರಹ್ಮಾ ಶಿವಶ್ಚ ಶತಮುಖಶ್ಚ ಸುರಾಃ ಪ್ರಣಮ್ಯ
ತ್ವಾಂ ತು ಸ್ತುವನ್ತಿ ಚ ಯಥಾಽತ್ರ ತಥಾಽಭ್ಯುಪೇಹಿ ॥

ತಾ॥ ಶಕಟಾಸುರನ ಶರೀರವು ಶಿಥಿಲವಾಗಿ ಭಗ್ನವಾಗಿ ಸೀಳಿಹೋಗಿ ನಾಶಹೊಂದುವಂತೆ ಪಾದಪ್ರಯೋಗವನ್ನು ಮಾಡಿದ ಸ್ವಾಮಿಯೇ! ಬ್ರಹ್ಮರುದ್ರೇನ್ದ್ರಾದಿ ದೇವತೆಗಳೆಲ್ಲರೂ ಸಾದರವಾಗಿ ಬಂದು ನಿನ್ನನ್ನು ಸೇವಿಸುತ್ತಿರಲು, ನೀನು ದಿವ್ಯತೇಜಃಪ್ರಕಾಶದೊಡನೆ ಆಕಾಶಮಾರ್ಗದಲ್ಲಿ ಮೇಲೆ ನಮ್ಮ ಕಣ್ಣಿಗೆ ತೋರುವಂತೆ ಒಂದುದಿನ ಬರಬೇಕೆಂದು ಪ್ರಾರ್ಥನೆ.

(೫) ವಿಣ್ಣಿಮಿಾದಿರುಪ್ಪಾಯ್ ಮಲೈಮೇಲ್ ನಿಱ್ಪಾಯ್
ಕಡಲ್ ಶೇರ್ಪ್ಪಾಯ್
ಮಣ್ಮಿಾದುೞಲ್ವಾಯಿವತ್ತುಳ್ಎಙ್ಗುಮ್
ಮತ್ತ್ಯನ್ದುಱೈವಾಯ್,
ಎಣ್ಮಿಾದಿಯನ್ತ ಪುಱವಣ್ಡತ್ತಾಯೆನದಾವಿ
ಉಳ್ಮಿಾದಾಡಿ ಯುರುಕ್ಕಾಟ್ಟಾದೇ ಯೊಳಿಪ್ಪಾಯೋ.

ಪ್ರ|| ವಿಣ್ಮಿಾದು-ಪರಮಪದದಲ್ಲೂ, ಇರುಪ್ಪಾಯ್-ಇರುವವನಾಗಿಯೂ, ಮಲೈಮೇಲ್-ಪರ್ವತದಮೇಲೂ, ನಿಱ್ಪಾಯ್ ನಿಲ್ಲುವವನಾಗಿಯೂ, ಕಡಲ್-ಸಮುದ್ರದಲ್ಲಿ, ಶೇರ್ಪ್ಪಾಯ್-ಶಯನಮಾಡಿರುವವನಾಗಿಯೂ, ಮಣ್ಮಿಾದು-ಭೂಮಿಯಮೇಲೆ, ಉೞಲ್ವಾಯ್-ಸಂಚರಿಸುವವನಾಗಿಯೂ, ಇವತ್ತುಳ್-ಈ ಪ್ರಪಂಚದಲ್ಲಿ, ಎಙ್ಗುಮ್ ಮತ್ತ್ಯನ್ದು-ಸಕಲಪದಾರ್ಥಗಳಲ್ಲೂ ಅನ್ತರ್ಯಾಮಿಯಾಗಿ ಮರೆಸಿಕೊಂಡು, ಉಱೈವಾಯ್-ವಾಸಮಾಡುವವನಾಗಿಯೂ, ಎಣ್ಮಿಾದು-ಸಂಖ್ಯೆಯನ್ನು ಮಿಾರಿ ಅಸಂಖ್ಯಾತವಾದ, ಇಯನ್ತ-ಸ್ವಭಾವವುಳ್ಳ, ಪುಱ ಅಣ್ಡತ್ತಾಯ್-ಬಹಿರಣ್ಡಗಳಲ್ಲೂ ಇರುವವನಾದ ನೀನು, ಎನದು ಆವಿ-ನನ್ನ ಪ್ರಾಣಾಶ್ರಯವಾದ ಮನಸ್ಸಿನಲ್ಲಿ, ಉಳ್ಮಿಾದು ಆಡಿ-ಒಳಗೆ ಸಂಚಾರಮಾಡಿ, ಉರು ಕಾಟ್ಟಾದೇ-ರೂಪವನ್ನು ತೋರಿಸದೆ, ಒಳಿಪ್ಪಾಯೋ-ಮರೆಸುವೆಯೋ?

( ಸ-ಗಾ-ರ || )—

ದಿವ್ಯೇ ಚ ಧಾಮನಿ ಗಿರೇ(ರು)ಪರಿ ಸ್ವಯಂ ತ್ವಂ
ಕ್ಷೀರೋದಧಾವಪಿ ಭುವೀಹ ಹೃದನ್ತರೇಷು |
ವಾಸಂ ಸ್ಥಿತಿಂ ಚ ಶಯನಂ ಚಲನಂ ಚ ವೃತ್ತಿಂ
ಪ್ರಾಪ್ಯಾಣ್ಡಗೋಽಸಿ ಹೃದಿ ಮೇಽತ್ರ! ಕಿಮಸ್ಯದೃಶ್ಯಃ? ||

ತಾ|| ಪರಮಪದದಲ್ಲೂ, ಪರ್ವತದಮೇಲೂ, ಸಮುದ್ರದಲ್ಲೂ, ಭೂಮಿಯ ಮೇಲೂ (ನಿನ್ನ ಅವತಾರಗಳಲ್ಲಿ) ವಾಸಮಾಡುತ್ತ, ಈ ಲೋಕದಲ್ಲೂ ಸಕಲ ವಸ್ತುಗಳಲ್ಲೂ ಅನ್ತರಾತ್ಮನಾಗಿ ಮರೆಸಿಕೊಂಡು ಇರುವವನಾಗಿ, ಅಸಂಖ್ಯಾತವಾದ ಬಹಿರಣ್ಡಗಳಲ್ಲೂ ವಾಸಮಾಡುವ ನೀನು ನನ್ನ ಅನ್ತಃಕರಣದಲ್ಲಿ ಒಳಗೆ ಸಂಚಾರ ಮಾಡುತ್ತಿದ್ದು, ನಿನ್ನ ರೂಪವನ್ನು ನನಗೆ ತೋರಿಸದೆ ಮರೆಸುತ್ತೀಯೋ?

(೬) ಪಾಯೋರಡಿವೈತ್ತದನ್ಕೀೞ್ ಪರವೈನಿಲಮೆಲ್ಲಾಮ್,
ತಾಯೋರಡಿಯಾಲೆಲ್ಲಾವುಲಕುಮ್ ತಡವನ್ದ,
ಮಾಯೋನುನ್ನೈಕ್ಕಾಣ್ಬಾನ್ ವರುನ್ದಿಯೆನೈನಾಳುಮ್,
ತೀಯೋಡುಡನ್ಶೇರ್ ಮೆೞುಕಾಯುಲಕಿಲ್ ತಿರಿವೇನೋ.

ಪ್ರ॥ ಓರಡಿ – ಒಂದು ಪಾದವನ್ನು, ಪಾಯ್ – ವಿಸ್ತರಿಸಿ, ವೈತ್ತು – ಇಟ್ಟು, ಅದನ್ಕೀೞ್ – ಅದರ ಕೆಳಗೆ, ಪರವೈ – ಸಮುದ್ರದೊಡನೆ, ನಿಲಮೆಲ್ಲಾಮ್ – ಸಕಲ ಭೂಮಿಯನ್ನೂ, ತಾಯ್ – ಅಳೆದು, ಓರಡಿಯಾಲ್ – ಮತ್ತೊಂದು ಪಾದದಿಂದ, ಎಲ್ಲಾವುಲಕುಮ್ – ಊರ್ಧ್ವಲೋಕವನ್ನೆಲ್ಲಾ, ತಡವನ್ದ – ಮೇಲೆ ಸ್ಪರ್ಶಿಸಿದ, ಮಾಯೋನ್ – ಆಶ್ಚರ್ಯಭೂತನೇ!, ಉನ್ನೈ – ನಿನ್ನನ್ನು, ಕಾಣ್ಬಾನ್ – ಕಾಣಬೇಕೆಂದು, ಎನ್ನೈನಾಳುಮ್ – ಎಲ್ಲಾ ಕಾಲದಲ್ಲೂ, ವರುನ್ದಿ – ಕ್ಲೇಶದೊಡನೆ, ತೀಯೋಡು – ಬೆಂಕಿಯೊಡನೆ, ಉಡನ್ಶೇರ್ – ಸಮೀಪದಲ್ಲಿ ಸೇರಿದ ಮೆೞುಕಾಯ್ – ಮೇಣದಂತೆ ಆಗಿ (ದ್ರವೀಭೂತನಾಗಿ), ಉಲಕಿಲ್ – ಲೋಕದಲ್ಲಿ, ತಿರಿವೇನೋ – ಅಲೆದಾಡುವೆನೋ ?

( ಸ–ಗಾ–ರ ॥ )—

ಏಕಂ ಪದಂ ಪ್ರಸರಣಾಜ್ಜಗತೀಹ ಕೃತ್ವಾ
ಸರ್ವತ್ರ ಚಾಪಿ ದಿವಿ ಚಾನ್ಯದಹೋ ! ನಿಧಾಯ ।
ಮಾಯಿನ್! ವಿಭಾಸಿ ! ತವ ದರ್ಶನಕಾಙ್ಕ್ಷಯಾಽಹಂ
ಕಿಂ ಸಞ್ಚರಾಮಿ ಭುವಿ ಹನ್ತ ! ಪರಿದ್ರುತಾಙ್ಗಃ ? ॥

ತಾ॥ ಒಂದು ಪಾದದಿಂದ ಭೂಮಿಯನ್ನೆಲ್ಲಾ ಆಕ್ರಮಿಸಿ, ಮತ್ತೊಂದು ಪಾದದಿಂದ ಊರ್ಧ್ವಲೋಕವನ್ನೆಲ್ಲಾ ಅಳೆದುಕೊಂಡ ಮಾಯಾಚೇಷ್ಟಿತನೇ! ನಿನ್ನನ್ನು ಕಾಣಬೇಕೆಂದು ಅನವರತ ಕ್ಲೇಶವುಳ್ಳವನಾಗಿ (ಬೆಂಕಿಯೊಡನೆ ಸೇರಿದ ಮೇಣದಂತೆ) ದ್ರವೀಭೂತನಾಗಿ ಲೋಕದಲ್ಲಿ ಅಲೆದಾಡುವೆನೋ ?

(೭) ಉಲಕಿಲ್ ತಿರಿಯುಮ್ ಕರುಮಗತಿಯಾಯುಲಕಮಾಯ್,
ಉಲಕುಕ್ಕೇಯೋರುಯಿರುಮಾನಾಯ್ ಪುಱವಣ್ಡತ್ತು,
ಅಲಕಿಲ್ಪೊಲಿನ್ದ ತಿಶೈಪತ್ತಾಯ ವರುವೇಯೋ,
ಅಲಕಿಲ್ಪೊಲಿನ್ದ ಅಱಿವಿಲೇನುಕ್ಕರುಳಾಯೇ.

ಪ್ರ|| ಉಲಕಿಲ್–ಲೋಕದಲ್ಲಿ, ತಿರಿಯುಮ್–ವ್ಯಾಪಿಸುತ್ತಿರುವ, ಕರುಮಗತಿಯಾಯ್–ಕರ್ಮಗತಿಗಳಿಗೆ ನಿರ್ವಾಹಕನಾಗಿಯೂ, ಉಲಕಮಾಯ್–ಲೋಕದಲ್ಲಿರುವ ಪ್ರಾಣಿಗಳಿಗೆಲ್ಲಾ ಅನ್ತರಾತ್ಮನಾಗಿಯೂ, ಉಲಕುಕ್ಕು–ಸರ್ವಲೋಕಗಳಿಗೂ, ಓರುಯಿರುಮಾನಾಯ್–ಅದ್ವಿತೀಯ ಶರೀರಿಯಾದವನಾಗಿಯೂ, ಪುಅವಣ್ಣತ್ತು–ಅಣ್ಡಾದ್ಬಹಿರ್ವರ್ತಿಗಳಾಗಿ, ಅಲಕಿಲ್ಪೊಲಿನ್ದ – ಅಸಂಖ್ಯಾತ ಸ್ವರೂಪರಾದ, ಪತ್ತುತಿಶೈ ಆಯ–ಹತ್ತುದಿಕ್ಕುಗಳಲ್ಲೂ ವ್ಯಾಪಿಸಿರುವ, ಅರುವೇ–ಮುಕ್ತವರ್ಗಗಳಿಗೂ ಶರೀರಿಯಾದವನೇ!, ಅಲಕಿಲ್ಪೊಲಿನ್ದ – ಅಪರಿಮಿತವಾದ, ಅಱಿವಿಲೇನುಕ್ಕು–ಅಜ್ಞಾನಕ್ಕೆ ವಶ್ಯನಾದ ನನಗೆ, ಅರುಳಾಯ್–(ಸಾಧನವೂ ನೀನೇ, ಫಲವೂ ನೀನೇ ಆಗಿ ಸರ್ವಸ್ವವೂ ನೀನೇ ಆಗುವಂತೆ) ಕೃಪೆಮಾಡು. ಓ–ಅಯ್ಯೋ!

( ಸ–ಗಾ–ರ || )—

ಲೋಕೇಽತ್ರ ಕರ್ಮಸರಣಿಶ್ಚ ಸಮಸ್ತಲೋಕ–
ಸ್ತ್ವಂ ಭಾಸಿ ಸರ್ವಜಗತಾಮಪಿ ಚೈಕ ಆತ್ಮಾ ।
ಬಾಹ್ಯಾಣ್ಡವರ್ತಿದಶದಿಕ್ಪತಿ–ಸೂರಿನಾಥ–
ಸ್ತ್ವಂ ಮೇ ಪ್ರಸೀದ ಭಗವನ್ನತಿಮನ್ದಬುದ್ಧೇಃ ||

ತಾ|| ಲೋಕದಲ್ಲಿ ಪ್ರಚಾರದಲ್ಲಿರುವ ಸರ್ವಕರ್ಮಗಳಿಗೂ ಸರ್ವಪ್ರಾಣಿಗಳಿಗೂ ಅಣ್ಡಾದ್ಬಹಿರ್ವರ್ತಿಗಳಾದ ಮುಕ್ತಾತ್ಮವರ್ಗಕ್ಕೂ—ಹೀಗೆ ಎಲ್ಲಾ ವಸ್ತುಗಳಿಗೂ ನಿರ್ವಾಹಕನಾದ ಸ್ವಾಮಿಯೇ! ನಾನು ಅಪರಿಮಿತವಾದ ಅಜ್ಞಾನಕ್ಕೆ ವಶ್ಯನಾಗಿರುವುದರಿಂದ ನನಗೆ ಕರ್ತವ್ಯಾಂಶವೇ ತೋರುವುದಿಲ್ಲ. ಸಾಧನವೂ ನೀನೇ, ಫಲವೂ ನೀನೇ ಆಗಿ ನಿಂತು, ನನಗೆ ಕೃಪೆಮಾಡು. (ಇಲ್ಲದಿದ್ದರೆ ನಾನು ಹೇಗೆ ಉಜ್ಜೀವಿಸುವೆನು ?)

(೮) ಅಱಿವಿಲೇನುಕ್ಕರುಳಾಯುಱಿವಾರುಯಿರಾನಾಯ್,
ವೆಱಿಕೊಳ್ ಶೋದಿಮೂರ್ತ್ತಿ ಯಡಿಯೇನೆಡುಮಾಲೇ,
ಕಿಱಿಶೆಯ್ದುನ್ನ್ಯ ಪ್ಪುಱತ್ತಿಟ್ಟನ್ನಮ್ ಕೆಡುಪ್ಪಾಯೋ,
ಪಿಱಿದೊನ್ಱಿಯಾವಡಿಯೇನಾವಿ ತಿಕೈಕ್ಕವೇ.

ಪ್ರ|| ಅಱಿವಾರ್ – ಜ್ಞಾನಿಗಳಾದ ವಿಲಕ್ಷಣರಿಗೂ, ಉಯಿರಾನಾಯ್ – ಧಾರಕನಾಗಿಯೂ, ವೆಱಿಕೊಳ್–ಸರ್ವಗನ್ಧನಾಗಿ, ಶೋದಿಮೂರ್ತ್ತಿ–ತೇಜೋಮೂರ್ತಿಯಾಗಿಯೂ ಇರುವ, ಅಡಿಯೇಱ ನೆಡುಮಾಲೇ–ದಾಸಭೂತನಾದ ನನ್ನ ಮಹಾಸ್ವಾಮಿಯೇ, ಅಱಿವಿಲೇನುಕ್ಕು–(ನಿನ್ನನ್ನು ಅನುಭವಿಸಲು) ಜ್ಞಾನಶೂನ್ಯ

ನಾದ ನನಗೆ, ಅರುಳಾಯ್ - (ನೀನು ನಿನ್ನ ಅನುಭವವನ್ನುಂಟುಮಾಡುವಂತೆ) ಕೃಪೆಮಾಡು. ಪ್ಪಿತ್ತಿದು ಒನ್ರು ಅತ್ತಿಯಾ-ಬೇರೆ ಗತ್ಯನ್ತರವನ್ನು ತಿಳಿಯದೆ ಇರುವ, ಅಡಿಯೇ‌ನ್ - (ನಿನಗೆ ಸರ್ವಪ್ರಕಾರದಲ್ಲೂ ವಶ್ಯನಾದ) ನನ್ನ, ಆವಿ - ಮನಸ್ಸು, ತಿಕೈಕ್ಕ-ಕರಗುವಂತೆ, ಕಿತ್ತಿಕೆಯ್ದು-(ನನಗೆ) ರುಚಿಯನ್ನು ಉಂಟುಮಾಡಿ, ಎನ್ನೈ-ನನ್ನನ್ನು, ಪುಱತ್ತು ಇಟ್ಟು - ಬಾಹ್ಯವಿಷಯಗಳಲ್ಲಿ ಸಿಕ್ಕಿಸಿ ಇಟ್ಟು, ಇನ್ನಮ್-ಇನ್ನು ಮೇಲೂ, ಕೆಡುಪ್ಪಾಯೋ-ಕೈಬಿಟ್ಟು ಕ್ಲೇಶಪಡಿಸುತ್ತೀಯೋ?

( ಸ-ಗಾ-ರ || )--

ತ್ವಂ ಜ್ಞಾನಿನಾಂ ಹೃದಿ ವಸನ್ನಸಿ ಸರ್ವಗಸ್ತ್ಯೋ
ಜ್ಯೋತಿರ್ಮಯೋಽಸಿ ಪಪ್ರಪಾಽದ್ಯ ಮಯಿ ಪ್ರಸೀದ |
ಅಜ್ಞೋಽಹಮಸ್ಮ್ಯಶರಣೋ ! ಹೃದಿ ಮೇ ಪ್ರವಿಶ್ಯ
ತ್ವಂ ಮಾಂ ಕಿಮದ್ಯ ಬಹಿರೇವ ಕರೋಷಿಮಿನ್ನಮ್ ||

ತಾ|| ಜ್ಞಾನಿಗಳಿಗೂ ಹೃದಯವರ್ತಿಯಾಗಿ ಸರ್ವಗನ್ಧನಾದ ತೇಜೋ ಮೂರ್ತಿಯಾದ ನನ್ನ ಮಹಾ ಸ್ವಾಮಿಯೇ! ಜ್ಞಾನಶೂನ್ಯನಾದ ನನಗೆ ನಿನ್ನ ಅನುಭವವುಂಟಾಗುವಂತೆ ಕೃಪೆಮಾಡು. ಉಪಾಯಾನ್ತರವನ್ನು ತಿಳಿಯದೆ ನಿನ್ನನ್ನೇ ಆಶ್ರಯಿಸಿರುವ ನನಗೆ ಈ ಪ್ರಕಾರ ರುಚಿಯನ್ನುಂಟುಮಾಡಿ ಇರುತ್ತೀಯೆ; ಇನ್ನು ಮೇಲೂ ಬಾಹ್ಯವಿಷಯಗಳಲ್ಲಿ ನನ್ನನ್ನು ಸಿಕ್ಕಿಸಿ ಕ್ಲೇಶಪಡಿಸುವೆಯೋ? (ಇದು ನ್ಯಾಯವೋ?)

(೯) ಆವಿತಿಕೈಕ್ಕ ಐವರ್ ಕುಮೈಕ್ಕುಮ್ ಶಿಱ್ಱಿನ್ಬಮ್,
ಪಾವಿಯೇನೈ ಪ್ಪಲನಿಕಾಟ್ಟಿ ಪ್ಪಡುಪ್ಪಾಯೋ,
ತಾವಿ ವೈಯಮ್ ಕೊಣ್ಡ ತಡಙ್ಗಣ್ಣಾ ಪೆರ್ಯೋಕಳ್ಳೇ,
ಕೂವಿಕ್ಕೊಳ್ಳುಮ್ ಕಾಲಮಿನ್ನಮ್ ಕುಱುಕಾದೋ.

ಪ್ರ|| ಆವಿ-ಮನಸ್ಸು, ತಿಕೈಕ್ಕ - ಕ್ಷೋಭವನ್ನು ಹೊಂದುವಂತೆ, ಐವರ್-ಪಂಚೇನ್ದ್ರಿಯಗಳೂ, ಕುಮೈಕ್ಕುಮ್ - ಅಪಟ್ಟು ಪೀಡಿಸುವ, ಶಿಱ್ಱಿನ್ಬಮ್-ಅಲ್ಪವಾದ ವಿಷಯಸುಖವನ್ನು, ಪಲಕಾಟ್ಟಿ-ಬಹುಮುಖವಾಗಿ ತೋರಿಸಿ, ನೀ-ನೀನು, ಪಾವಿಯೇನೈ - ಪಾಪಿಯಾದ ನನ್ನನ್ನು, ಪಡುಪ್ಪಾಯೋ-ನಾಶಪಡಿಸಲು ಉದ್ದೇಶಿಸುತ್ತೀಯೋ? ವೈಯಮ್ - ಭೂಮಿಯನ್ನು, ತಾವಿಕೊಣ್ಡ - ಅಳೆದು ಕೊಂಡ, ತಡಮ್ ತಾಮರೈಕಳ್ಳೇ- ವಿಶಾಲವಾದ (ಭೋಗ್ಯವಾದ) ಪಾದಾಮ್ಬುಜ

ಗಳಿಗೇ, ಕೂವಿಕ್ಕೊಳ್ಳುಮ್-(ನನ್ನನ್ನು) ಸೇರಿಸಿಕೊಳ್ಳಲು ಕೂಗಿ ಕರೆದುಕೊಳ್ಳುವ, ಕಾಲಮ್-ಸಮಯವು, ಇನ್ನಮ್-ಈಗಲೂ, ಕುಱುಕಾದೋ - ಸಮೀಪಿಸುತ್ತುದಿಲ್ಲವೋ ?

( ಸ-ಗಾ-ರ॥ )—

ಚಿತ್ತಭ್ರಮಾವಹತಯಾಽಲ್ಪಸುಖಂ ಪ್ರದರ್ಶ್ಯ
ಪಞ್ಚೇನ್ದ್ರಿಯಾರ್ತಿವಿವಶಂ ಕಿಮು ಪಾಪಿನಂ ಮಾಮ್ ।
ತ್ವಂ ನಾಶಯಸ್ಯಹಹ ? ಭೂಮಿತಲಾಕ್ರಮಿ ತ್ವತ್-
ಪಾದಾಮ್ಬುಜಂ ಪ್ರತಿ ಕದಾ ನು ಸಮಾಹ್ವಯೇರ್ಮಾಮ್ ? ॥

ತಾ॥ ನನ್ನ ಮನಸ್ಸು ಕ್ಷೋಭವನ್ನು ಹೊಂದುವಂತೆ ನನ್ನನ್ನು ಪಂಚೇನ್ದ್ರಿಯಗಳಿಗೆ ವಶಮಾಡಿ ಅಲ್ಪಸುಖವನ್ನು ತೋರಿಸಿ ನಾಶಪಡಿಸುವಿಯೋ ? ತ್ರಿವಿಕ್ರಮನಾಗಿ ಭೂಮಿಯನ್ನೆಲ್ಲಾ ಅಳೆದುಕೊಂಡ ನಿನ್ನ ವಿಶಾಲವಾದ ಪಾದಾಮ್ಬುಜದ ಸನ್ನಿಧಿಗೆ ನನ್ನನ್ನು ಕೂಗಿ ಕರೆದುಕೊಳ್ಳುವ ಸಮಯವು ಇನ್ನೂ ಬರಲಾರದೋ ? (ಎಂದಿಗೆ ಬರುವುದು ?)

(೧೦) ಕುಱುಕಾ ನೀಳಾ ಇಱುದಿ ಕೂಡಾ ಎನ್ನೈಯೂೞಿ,
ಶಿಱುಕಾ ಪೆರುಕಾ ಅಳವಿಲಿನ್ಬಮ್ ಶೇರ್‌ನ್ದಾಲುಮ್,
ಮಱುಕಾಲಿನ್ಱಿ ಮಾಯೋನುನಕ್ಕೇಯಾಳಾಕುಮ್,
ಶಿಱುಕಾಲತ್ತೈ ಉಱುಮೋ ಅನ್ದೋ ತೆರಿಯಿಲೇ.

ಪ್ರ॥ ಕುಱುಕಾನೀಳಾ - ಸಂಕೋಚವಿಕಾಸವಿಲ್ಲದ, ಇಱುದಿ - ನಾಶವೂ, ಕೂಡಾ-ಇಲ್ಲದೇ ಇರುವ, ಎನ್ನೈಯೂೞಿ - ಸರ್ವಕಾಲವರ್ತಿಯಾದ, ಶಿಱುಕಾ ಪೆರುಕಾ-ಕ್ಷಯವೃದ್ಧಿಗಳಿಲ್ಲದ, ಅಳವಿಲ್ ಇನ್ಬಮ್-ಅಪರಿಚ್ಛಿನ್ನವಾದ ಆತ್ಮಾನುಭವಾನನ್ದವನ್ನು (ಕೈವಲ್ಯಸುಖವನ್ನು), ಶೇರ್‌ನ್ದಾಲುಮ್ - ಹೊಂದಿದರೂ, ಮಾಯೋ — ಆಶ್ಚರ್ಯಭೂತನೇ !, ತೆರಿಯಿಲ್ - ನಿರೂಪಿಸಿ ನೋಡಿದರೆ, ಮಱುಕಾಲಿನ್ಱಿ-ಇನ್ನು ಯಾವ ಸಮಯವೂ ಇಲ್ಲದೆ, ಉನಕ್ಕೇ ಆಳಾಕುಮ್-ನಿನಗೇ ದಾಸಭೂತನಾಗಿ ಕೈಂಕರ್ಯರಸವನ್ನು ಅನುಭವಿಸುವ, ಶಿಱುಕಾಲತ್ತೈ-ಅಲ್ಪಕಾಲಕ್ಕಾದರೂ, ಉಱುಮೋ-ಸದೃಶವಾಗುವುದೋ ? ಅನ್ದೋ-ಅಯ್ಯೋ ?

( ಸ-ಗಾ-ರ ॥ )—

ಸಙ್ಕೋಚವೃದ್ಧಿರಹಿತಂ ಸತತಂ ತ್ವನನ್ತಂ
ಚಾತ್ಮಾನುಭೂತಿಸುಖಮಪ್ಯಥಹ ! ಭ್ರವಾಯ |
ವಲಾಯಿರ್! ಹರೇ! ತವಪದಾಮ್ಬುಜಮಾತ್ರಸೇವಾ-
ಲೇಶಸ್ಯ ಕಿಂ ಸದೃಶಮಸ್ತಿ ಬತಾದ್ಭುತಸ್ಯ ? ||

ತಾ॥ (ಕೈವಲ್ಯವು ನಿತ್ಯವಾಗಿದ್ದರೂ ಶ್ರೀ ಭಗವತ್ಕೈಂಕರ್ಯರಸದ ಒಂದು ಕ್ಷಣಮಾತ್ರದ ಆನನ್ದವನ್ನೂ ಉಂಟುಮಾಡಲಾರದೆಂದು ಹೇಳುತ್ತಾರೆ) ಸಂಕೋಚ ವಿಕಾಸವಿಲ್ಲದೆ ಅವಿನಾಶ್ಯವಾಗಿ ಸರ್ವಕಾಲವರ್ತಿಯಾದ ಅಪರಿಚ್ಛಿನ್ನವಾದ ಆತ್ಮಾನುಭವ (ಕೈವಲ್ಯ) ಸುಖವನ್ನು ಹೊಂದಿದಾಗ್ಯೂ ಅದು ನಿನಗೇ ದಾಸಭೂತ ನಾಗಿ ಕೈಂಕರ್ಯರಸವನ್ನು ಅನುಭವಿಸುವ ಅಲ್ಪಕಾಲದ ಆನನ್ದಾತಿಶಯಕ್ಕಾದರೂ ಸಮಾನವಾಗುವುದೋ ? (ಎಂದಿಗೂ ಸಮಾನವಾಗಲಾರದು—ಎಂದು ಭಾವವು.)

(೧೧) ತೆರಿದಲ್ ನಿನ್ಯೆದಲೆಣ್ಣಲಾಕಾ ತ್ತಿರುವಾಲುಕ್ಕು,
ಉರಿಯತೊಣ್ಡರ್ ತೊಣ್ಡರ್‌ತೊಣ್ಡನ್ ಶಡಕೋಪನ್,
ತೆರಿಯಚ್ಚೊನ್ನ ವೋರಾಯಿರತ್ತುಳಿಪ್ಪತ್ತುಮ್,
ಉರಿಯ ತೊಣ್ಡರಾಕ್ಕುಮುಲಕಮುಣ್ಡಾರ್ಕ್ಕೇ.

ಪ್ರ॥ ತೆರಿದಲ್-(ಶ್ರವಣದಿಂದ) ತಿಳಿಯೋಣ, ನಿನ್ಯೆದಲ್ - (ಮನನದಿಂದ) ಚಿನ್ತನ, ಎಣ್ಣಲ್ - (ನಿದಿಧ್ಯಾಸನದಿಂದ) ಧ್ರುವಸ್ಮೃತಿಯೆಂಬ ಸನ್ತತಧ್ಯಾನ, (ಇವುಗಳನ್ನೆಲ್ಲಾ ಮಾಡಿದಾಗ್ಯೂ), ಆಕಾ-ಇವುಗಳಿಗೆ ಗೋಚರವಾಗದೆ ಅಪರಿಚ್ಛೇದ್ಯಸ್ವರೂಪನಾದ, ತಿರುಮಾಲುಕ್ಕು - ಶ್ರಿಯಃಪತಿಗೆ, ಉರಿಯತೊಣ್ಡರ್ - ಅನನ್ಯಾರ್ಹರಾದ ದಾಸಭೂತರಿಗೆ, ತೊಣ್ಡರ್-ದಾಸಭೂತರಾದವರಿಗೆ, ತೊಣ್ಡನ್ -ದಾಸಭೂತನಾದ, ಶಡಕೋಪನ್-ಶ್ರೀ ಶಠಾರಿಮುನಿಯು, ತೆರಿಯ-(ಭಗವನ್ಮಹಿಮೆಯನ್ನು) ವಿಶದವಾಗಿ, ಶೊನ್ನ-ಹೇಳಿದ, ಓರಾಯಿರತ್ತುಳ್-ಒಂದು ಸಹಸ್ರ ಪದ್ಯಮಾಲೆಯೊಳು, ಇಪ್ಪತ್ತುಮ್-ಈ ದಶಕವು (ಪಠಿಸುವವರನ್ನು), ಉಲಕಮುಣ್ಡಾರ್ಕ್ಕೇ - ಸರ್ವಜಗದ್ರಕ್ಷಕನಾದ ಸ್ವಾಮಿಗೇ, ಉರಿಯತೊಣ್ಡರಾಕ್ಕುಮ್-ಅನನ್ಯಾರ್ಹದಾಸಭೂತರನ್ನಾಗಿ ಮಾಡುವುದು.

( ಸ-ಗಾ-ರ || )—

ದೂರಂ ಶ್ರುತೇಶ್ಚ ಮನನಸ್ಯ ಧೃಢಸ್ಮೃತೇಶ್ಚ
ಶ್ರೀಶಂ ತದೀಯಚರಣಾಶ್ರಿತದಾಸದಾಸಃ |
ಸ್ತೋತುಂ ಶಠಾರಿರವದಚ್ಛ ಸಹಸ್ರಮೇತ-
ದ್ಧೃಶ್ಯಾತ್ ಕರೋತಿ ದಶಕಃ ಜಗದೀಶದಾಸಾಃ ||

ತಾ|| ಶ್ರವಣ-ಮನನ-ನಿದಿಧ್ಯಾಸನಗಳಿಂದಲೂ ಅಪರಿಚ್ಛೇದ್ಯಮಹಿಮನಾದ ಶ್ರಿಯಃಪತಿಗೆ ಅನನ್ಯಾರ್ಹದಾಸರಾದವರಿಗೆ ದಾಸಾನುದಾಸಭೂತರಾದ ಶ್ರೀ ಶಠಾರಿ ಮುನಿವರ್ಯರಿಂದ ರಚಿಸಲ್ಪಟ್ಟ ಸಹಸ್ರಪದ್ಯಮಾಲೆಯೊಳು ಈ ದಶಕವು ಪಠನ ಮಾಡುವವರನ್ನು (ಸಕಲ ಜಗದ್ರಕ್ಷಕನಾಗಿ) ಸರ್ವ ಜಗದ್ರಕ್ಷಕನಾದ ಸ್ವಾಮಿಗೇ ಅನನ್ಯಾರ್ಹದಾಸರನ್ನಾಗಿ ಮಾಡುವುದು.

( ದ್ರ-ಉ-ಸಂ || )—

ಆಲೋಕನೇಽಪಿ ವಿಷಯಸ್ಯ ಭೃಶಂ ವಿಭಗ್ನೋ
ರೂಪೇ ಹರೇಸ್ಸಕಲಲೋಕಮಯೇ ನಿರಾಶಃ |
ಅಪ್ರಾಕೃತೇ ವಪುಷಿ ಲೋಲಮನಾಸ್ತಮುಚ್ಚೈ-
ರಾಕಾರಯತ್ಪ್ರಲಪಿತೈರ್ನವಮೇ ಶಠಾರಿಃ ||

( ದ್ರ-ಉ-ತಾ-ರ || )—

ಸರ್ವಾತ್ಮತ್ವಾಜ್ಜಗತ್ಯಾಃ ಕ್ರಮಣತ ಉತ ಸಂರಕ್ಷಣಾದ್ವಿಷ್ಟಪಾನಾಂ
ಶತ್ರುಧ್ವಂಸಾತ್ ಪರತ್ವಾದ್ಯಭಿಮತದಶಯಾ ಪಙ್ಕ್ತಿಧಾಽವಸ್ಥಿತತ್ವಾತ್ |
ನಿರ್ವಾಹಾದಣ್ಡಕೋಟ್ಯಾ ಬುಧದಯಿತತಯಾ ಸರ್ವಶೀರ್ಷಾಙ್ಘ್ರಿದಾನಾತ್
ಮೋಕ್ಷೇಚ್ಛೋತ್ಪಾದಕತ್ವಾದ್ಧರಿಮಥ ಶಠಜಿದ್ದೃಶ್ಯನರ್ಹದ್ವಿಯೋಗವತ್ ||

(ಈ ನವಮದಶಕದ ಸಾರಾಂಶ)—

ಈ ಒಂಬತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಭಗವಂತನನ್ನು ಕಾಣದೆ ಅತ್ಯಂತ ಖಿನ್ನರಾಗಿ ಪರಮಪದದಿಂದಲಾದರೂ ಬಂದು ನನ್ನ ಕಣ್ಣಿಗೆ ದೃಶ್ಯನಾಗಿ ನನಗೆ ನಿನ್ನ ಕೈಂಕರ್ಯರಸದ ಅನನ್ಯಾನುಭವವನ್ನು ಉಂಟುಮಾಡ ಬೇಕೆಂದು ಪರಮಾರ್ತಿಯೊಡನೆ ಪ್ರಾರ್ಥಿಸುತ್ತಾರೆ.



ಶ್ರೀಃ

# ಷಷ್ಠಶತಕದಲ್ಲಿ—ದಶಮದಶಕ

## (ಉಲಕಮುಣ್ಡಪೆರುವಾಯಾ—)

(ಈ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಪದ್ಮಾಸಮೇತನಾದ ಶ್ರೀವೇಙ್ಕಟಾಚಲ ಪತಿಯ ಚರಣಾರವಿನ್ದಗಳಲ್ಲಿ ಶರಣಾಗತಿಯಂ ಮಾಡುತ್ತಾರೆ.)

---

(೧) ಉಲಕಮುಣ್ಡಪೆರುವಾಯಾ ವುಲಪ್ಪಿಲ್‌ಕೀರ್ತ್ತಿಯಮ್ಮಾನೇ
ನಿಲವುಮ್ ಶುಡರ್‌ಶೂೞೊಳಿಮೂರ್ತ್ತಿ
ನೆಡಿಯಾಯಡಿಯೇನಾರುಯಿರೇ.
ತಿಲದಮುಲಕುಕ್ಕಾಯ್‌ನಿನ್ರ ತಿರುವೇಙ್ಗಡತ್ತೆಮ್ಪೆರುಮಾನೇ
ಕುಲತೊಲಡಿಯೇನುನಪಾದಮ್ ಕೂಡುಮಾಱು
ಕೂಱಾಯೇ

ಪ್ರ|| ಉಲಕಮ್–ಲೋಕಗಳನ್ನೆಲ್ಲಾ, ಉಣ್ಡ–ಭಕ್ಷಿಸಿದ, ಪೆರುವಾಯಾ–ಮಹಾವಕ್ತ್ರವುಳ್ಳ, ಉಲಪ್ಪಿಲ್–ಅಪಾರವಾದ, ಕೀರ್ತ್ತಿ–ಯಶಸ್ಸುಳ್ಳ, ಅಮ್ಮಾನೇ–ಸ್ವಾಮಿಯೇ, ನಿಲವುಮ್‌ಶುಡರ್‌ಶೂೞ್-ಸ್ವಾಭಾವಿಕೌಜ್ಜ್ವಲ್ಯಪೂರ್ಣವಾದ, ಒಳಿ-ಪ್ರಕಾಶವುಳ್ಳ, ಮೂರ್ತ್ತಿ–ದಿವ್ಯಮಂಗಳ ವಿಗ್ರಹಯುಕ್ತನಾದ, ನೆಡಿಯಾಯ್–ಮಹಾಮಹಿಮೆಯುಳ್ಳ, ಅಡಿಯೇನ್ ಆರುಯಿರೇ-ದಾಸನಾದ ನನಗೆ ಪೂರ್ಣಪ್ರಾಣರೂಪನೇ, ಉಲಕುಕ್ಕು – ಸರ್ವಲೋಕಗಳಿಗೂ, ತಿಲದಮಾಯ್–ತಿಲಕಪ್ರಾಯನಾಗಿ, ನಿನ್ರ– ನಿಂತ, ತಿರುವೇಙ್ಗಡತ್ತು ಎಮ್ಪೆರುಮಾನೇ-ತಿರುಪತಿಯಲ್ಲಿರುವ ನನ್ನ ಸ್ವಾಮಿಯೇ, ಕುಲಮ್–ಕುಲಕ್ರಮವಾಗಿ, ತೊಲ್–ಅನಾದಿಸಿದ್ಧವಾದ, ಅಡಿಯೇನ್-ದಾಸ್ಯವುಳ್ಳ ನಾನು, ಉನಪಾದಮ್ – ನಿನ್ನ ಪಾದಗಳನ್ನು, ಕೂಡುಮಾಱು-ಸೇರುವ ಪ್ರಕಾರವನ್ನು, ಕೂಱಾಯ್–ಕೃಪೆಯಿಟ್ಟು ಹೇಳು.

(ಸ–ಗಾ–ರ ||)—
ಮನ್ನಾಥ! ತ್ವಂ ಹಿ ಲೋಕಾನ್ ಪೃಥುವದನತಯಾ ಭಕ್ಷಯಸ್ಯನ್ತಕಾಲೇ!
ನಿಸ್ಸೀಮಾ ಭಾತಿ ಕೀರ್ತಿಸ್ತವ ವಿಶದಮಹಃ ಜ್ಯೋತಿರೂರ್ಧ್ವ ಮೂರ್ತಿಃ!
ಸರ್ವಶ್ರೇಷ್ಠೋಽನ್ತರಾತ್ಮಾ ಮಮ ಕಿಲ! ತಿಲಕಸ್ಸರ್ವಲೋಕೇಷು ಭಾಸಿ!
ಶ್ರೀಶಸ್ತ್ವಂ ವೇಙ್ಕಟೇಶಃ ಕಥಮಹಮನಘಂ ತ್ವತ್ಪದಾಬ್ಜೇ ಭಜೇಯಮ್ ||

ತಾ॥ ಸರ್ವಲೋಕರಕ್ಷಕನಾಗಿಯೂ, ಅಪಾರ ಕೀರ್ತಿಯುಕ್ತನಾಗಿಯೂ, ಸ್ವಾಭಾವಿಕ ಗುಣೌಜ್ಜ್ವಲ್ಯಪರಿಪೂರ್ಣವಾದ ತೇಜೋಮೂರ್ತಿಯಾಗಿಯೂ, ಮಹಾಮಹಿಮೆಯುಳ್ಳವನಾಗಿಯೂ, ದಾಸನಾದ ನನಗೆ ಪ್ರಾಣರೂಪನಾಗಿಯೂ, ಸಕಲಲೋಕ ತಿಲಕಪ್ರಾಯನಾಗಿಯೂ ನಿಂತಿರುವ ಶ್ರೀ ವೇಙ್ಕಟಾದ್ರೀಶ್ವರನೇ! ಅನಾದಿಸಿದ್ಧವಾದ ದಾಸ್ಯವುಳ್ಳ ನಾನು ನಿನ್ನ ಪಾದಗಳನ್ನು ಸೇರುವ ಪ್ರಕಾರವನ್ನು ಕೃಪೆಯಿಂದ ಹೇಳು.

(೨) ಕೂಱಾಯ್ ನೀಱಾಯ್ ನಿಲನಾಕಿ
ಕ್ಕೊಡುವಲ್ಲಶುರರ್ ಕುಲಮೆಲ್ಲಾಮ್,
ಶೀಱಾವೆರಿಯುಮ್ ತಿರುನೇಮಿ ವಲವಾ
ತೆಯ್ವಕ್ಕೋಮಾನೇ,
ಶೇಱಾರ್ ಶುನೈತ್ತಾಮರೈ ಶೆನ್ದೀಮಲರುಮ್
ತಿರುವೇಙ್ಗಡತ್ತಾನೇ,
ಆಱಾವನ್ಬಿಲಡಿಯೇನುನ್ನಡಿಶೇರ್ ವಣ್ಣಮರುಳಾಯೇ.

ಪ್ರ॥ ಕೊಡು-ಕ್ರೂರರಾಗಿ, ವಲ್-ಪ್ರಬಲರಾದ, ಅಶುರರ್ - ರಾಕ್ಷಸರ, ಕುಲಮೆಲ್ಲಾಮ್-ಸಮೂಹವೆಲ್ಲಾ, ಕೂಱಾಯ್-ನಾನಾವಿಧವಾಗಿ ಶಕಲಗಳಾಗಿ ಭಿನ್ನವಾಗಿ, ನೀಱಾಯ್-ಧೂಳಿಯಾಗಿ, ನಿಲನಾಕಿ ಭೂಮಿಯಲ್ಲಿ ಸೇರಿ ನಷ್ಟವಾಗುವಂತೆ, ಶೀಱಾ-ಅತ್ಯನ್ತ ಕೋಪವುಳ್ಳ, ಎರಿಯುಮ್-ಪ್ರಜ್ವಲಿಸುವ, ತಿರುನೇಮಿ-ವೀರಶ್ರೀಯುಕ್ತವಾದ ಚಕ್ರವನ್ನು, ವಲವಾ-ಆಳುವ ಸರ್ವೇಶ್ವರನೇ!, ತೆಯ್ವ-ನಿತ್ಯಸೂರಿಗಳಿಗೂ, ಕೋಮಾನೇ-ಸ್ವಾಮಿಯಾದವನೇ !, ಶೇಱು ಆರ್-ಕೆಸರಿನಿಂದ ಕೂಡಿದ, ಶುನೈ-ಪ್ರವಾಹಗಳ ತೀರದಲ್ಲಿ, ತಾಮರೈ-ತಾವರೆಪುಷ್ಪಗಳು, ಶೆಮ್‌ತೀ-ಕೆಂಪಾದ ಅಗ್ನಿಯಂತೆ, ಮಲರುಮ್-ವಿಕಸಿಸುವ, ತಿರುವೇಙ್ಗಡತ್ತಾನೇ-ತಿರುಪತಿ ಬೆಟ್ಟದಲ್ಲಿ ವಾಸಮಾಡುವವನೇ!, ಆಱಾ-ಅಪರಿಮಿತವಾದ, ಅನ್ಬಿಲ್-ಪ್ರೇಮದಲ್ಲಿ ಮಗ್ನನಾಗಿರುವ, ಅಡಿಯೇನ್-ದಾಸನಾದ ನಾನು, ಉನ್ ಅಡಿ-ನಿನ್ನ ಪಾದಗಳನ್ನು, ಶೇರ್ ವಣ್ಣಮ್-ಸೇರುವ ರೀತಿಯನ್ನು, ಅರುಳಾಯ್-ಕೃಪೆಯಿಂದ ಹೇಳು.

( ಸ-ಗಾ-ರ ॥ )—

ದುಷ್ಟಾತ್ಮಾನಃ ಪ್ರಣಷ್ಟಾಸ್ತ್ವಯಮಸುರಗಣಾಸ್ತೇ ಬಲಿಷ್ಠಾಃ ಪ್ರದಗ್ಧಾ-
ಶ್ಚಕ್ರಂ ಹಸ್ತೇ ಬಿಭರ್ಷಿ ಸ್ವಯಮಹಹ! ಹರೇ! ದಕ್ಷಿಣೇ ದೇವದೇವ ! ।
ತೀರ್ಥೇಷ್ವನ್ಯೇಷ್ವಪೀದೇ ಪ್ರೇಷ್ವನಲಕುಲಸಮೇಷ್ವತ್ರ ವೈ ವೇಙ್ಕಟಾದ್ರೌ
ಭಾಸಿ ತ್ವಂ! ಕ್ಷಿಪ್ರಮೇನಂ ಕುರು ತವ ಚರಣದ್ವನ್ದ್ವಸಕ್ತಂ ಜನಂ ಮಾಮ್॥

ತಾ॥ ಪ್ರಬಲವಾದ ರಾಕ್ಷಸಕುಲವನ್ನೆಲ್ಲಾ ಧ್ವಂಸಮಾಡಿ ಧೂಳಿಯಾಗಿ ಮಾಡಿದ, ಪ್ರಜ್ವಲಿಸುವ ಚಕ್ರವನ್ನು ಧರಿಸಿರುವ ನಿತ್ಯಸೂರೀಶ್ವರನಾದ ಸ್ವಾಮಿಯೇ! ವಿಕಸಿತೋಜ್ವಲ ಪುಣ್ಡರೀಕಶೋಭಿತವಾದ ವೇಂಕಟಾದ್ರಿಯಲ್ಲಿ ವಾಸಮಾಡುವ ಸ್ವಾಮಿಯೇ! ನಿನ್ನಲ್ಲಿ ಅಪಾರವಾದ ಪ್ರೇಮಾರ್ಣವದಲ್ಲಿ ಮಗ್ನನಾಗಿರುವ ದಾಸಭೂತನಾದ ನಾನು ನಿನ್ನ ಪಾದಗಳನ್ನು ಸೇರುವ ರೀತಿಯನ್ನು ಕೃಪೆಯಿಂದ ಹೇಳು.

(೩) ವಣ್ಣಮರುಳ್ಕೊಳ್ಅಣಿಮೇಕವಣ್ಣಾ ಮಾಯಅಮ್ಮಾನೇ,
ಎಣ್ಣಮ್ಪುಕುನ್ದು ತಿತ್ತಿಕ್ಕುಮಮುದೇ
ಇಮ್ಮೈಯೋರದಿಪತಿಯೇ,
ತೆಣ್ಣಲರುವಿ ಮಣಿಪೊನ್ಮುತ್ತಲೈಕ್ಕುಮ್
ತಿರುವೇಙ್ಗಡತ್ತಾನೇ,
ಅಣ್ಣಲೇ ಉನ್ನಡಿಶೇರ ಅಡಿಯೇಱ್ಕಾವಾವೆನ್ನಾಯೇ.

ಪ್ರ॥ ವಣ್ಣಮ್–ಬಣ್ಣದಲ್ಲಿ, ಮರುಳ್ಕೊಳ್ – ಭ್ರಾನ್ತಿಯುಂಟಾಗುವಂತೆ, ಅಣಿ–ಸೌನ್ದರ್ಯವುಳ್ಳ, ಮೇಕವಣ್ಣಾ – ಮೇಘದಂತೆ ಶರೀರವುಳ್ಳ ಸ್ವಾಮಿಯೇ!, ಮಾಯ ಅಮ್ಮಾನೇ–ಆಶ್ಚರ್ಯಕರವಾದ ಸ್ವಭಾವವುಳ್ಳ ಸ್ವಾಮಿಯೇ!, ಎಣ್ಣಮ್–ಮನಸ್ಸಿನೊಳಗೆ, ಪುಕುನ್ದು–ಪ್ರವೇಶಿಸಿ, ತಿತ್ತಿಕ್ಕುಮ್–ರುಚಿಸುವ ಅಮುದವೇ-ಅಮೃತವೇ! ಇಮ್ಮೈಯೋರ್ ಅದಿಪತಿಯೇ – ನಿತ್ಯಸೂರಿಗಳಿಗೂ ಅಧಿಪತಿಯಾದವನೇ!, ತೆಳ್ನಲ್ ಅರುವಿ–ನಿರ್ಮಲವಾಗಿ ರಮ್ಯವಾದ ಪ್ರವಾಹಗಳು, ಮಣಿ–ರತ್ನಗಳನ್ನೂ, ಪೊನ್–ಸುವರ್ಣವನ್ನೂ, ಮುತ್ತು–ಮುತ್ತುಗಳನ್ನೂ, ಅಲೈಕ್ಕುಮ್–ತಂದು ರಾಶಿಹಾಕುವ, ತಿರುವೇಙ್ಗಡತ್ತಾನೇ–ತಿರುಪತಿ ಬೆಟ್ಟದಲ್ಲಿ ವಾಸಮಾಡುವವನೇ, ಅಣ್ಣಲೇ–ಸರ್ವೇಶ್ವರನೇ!, ಉನ್ ಅಡಿಶೇರ–ನಿನ್ನ ಪಾದಗಳನ್ನು ಸೇರಲು, ಅಡಿಯೇಱ್ಕು–ದಾಸಭೂತರಾದ ನಮಗೆ, ಆ ಆ ಎನ್ನಾಯೇ- ಅಯ್ಯೋ! ಅಯ್ಯೋ! ಎಂದು ಕೃಪೆಮಾಡು.

( ಸ–ಗಾ–ರ ॥ )—

ಕಾರುಣ್ಯಂ ಶೀಲಸಿದ್ಧಂ ತವ ಕಿಲ ಜಲದಶ್ಯಾಮ! ಮಾಯಾಚರಿತ್ರ!
ಸ್ವಾಮಿನ್! ಹೃತ್ಪದ್ಮಮಧ್ಯೇ ಮಧುರತಮರಸಸ್ವಾದ್ವಮೃತಾತ್ಮಾಽಮರೇಶಃ|
ಸತ್ಯಂ ಭಾಸಿ ತ್ವಮೇವಂ! ಮಣಿಕನಕಮಹಾಮೌಕ್ತಿಕಾನಾಂ ಚ ರಾಶೀ-
ನಾಕರ್ಷಣ ವೇಙ್ಕಟಾದ್ರೌ ರುಚಿರಸರಿತಿ ಮಾಂಯೋಜಯ ತ್ವತ್ಪದಾಬ್ಜೇ॥

ತಾ|| ನೀಲಮೇಘಶ್ಯಾಮನಾಗಿಯೂ, ಮಾಯಾಚೇಷ್ಟಿತವುಳ್ಳವನಾಗಿಯೂ, ಅಮೃತಪ್ರಾಯನಾಗಿಯೂ, ನಿತ್ಯಸೂರೀಶ್ವರನಾಗಿಯೂ, ಮಣಿಕನಕಮುಕ್ತಾದಿ ವಿರಾಜಮಾನವಾದ ವೇಙ್ಕಟಾದ್ರಿಗೆ ಸ್ವಾಮಿಯಾಗಿಯೂ ಇರುವ ಸರ್ವೇಶ್ವರನೇ!, ನಿನ್ನ ಪಾದಗಳನ್ನು ನಾವು ಸೇರುವಂತೆ ದಾಸಭೂತರಾದ ನಮ್ಮ ವಿಷಯದಲ್ಲಿ ನೀನು (ಅಯ್ಯೋ ! ಅಯ್ಯೋ !—ಎಂದು) ಅನುಕಮ್ಪೆಯೊಡನೆ ಕೃಪೆಮಾಡು.

(೪) ಆವಾವೆನ್ನಾದುಲಕತ್ತೈ ಯಲೈಕ್ಕುಮಶುರರ್
ವಾಣಾಳ್ಮೇಲ್,
ತೀವಾಯ್ವಾಳಿ ಮಳ್ಳೈಪೊಳಿನ್ದ ಶಿಲೈಯಾ
ತಿರುಮಾಮಕಳ್ಕೇಳ್ವಾ,
ತೇವಾ, ಶುರರ್ಕಳ್ ಮುನಿಕ್ಕಣಙ್ಗಳ್ ವಿರುಮ್ಬುಮ್
ತಿರುವೇಙ್ಗಡತ್ತಾನೇ,
ಪೂವಾರ್ಕಳಲ್ಕಳರುವಿನೈಯೇನ್ ಪೊರುನ್ದುಮಾಱು
ಪುಣರಾಯೇ.

ಪ್ರ|| ಉಲಕತ್ತೈ–ಲೋಕವನ್ನು, ಆ ಆ ಎನ್ನಾದು–ಅಯ್ಯೋ! ಅಯ್ಯೋ! ಎನ್ನದೆ, ಅಲೈಕ್ಕುಮ್–ಪೀಡಿಸುವಂತಹ, ಅಶುರರ್–ರಾಕ್ಷಸರ, ವಾಣಾಳ್ಮೇಲ್–ಪ್ರಾಣಗಳಮೇಲೆ, ತೀವಾಯ್ವಾಳಿ–ಅಗ್ನಿಮುಖವಾದ ಬಾಣಗಳನ್ನು, ಮಳ್ಳೈ–ಮಳೆಯಂತೆ, ಪೊಳಿನ್ದ–ವರ್ಷಿಸುವ, ಶಿಲೈಯಾ–ಧನುಸ್ಸುಳ್ಳವನೇ!, ತಿರುಮಾಮಕಳ್–ಶ್ರೀ ಮಹಾಲಕ್ಷ್ಮೀದೇವಿಗೆ, ಕೇಳ್ವಾ–ಅನುರೂಪನಾಯಕನೇ!, ತೇವಾ–ದಿವ್ಯತೇಜೋನಿಧಿಯೇ!, ಶುರರ್ಕಳ್ – ದೇವತೆಗಳೂ, ಮುನಿ – ಋಷಿಗಳೂ, ಕಣಙ್ಗಳ್–ಸಮೂಹಗಳಾಗಿ, ವಿರುಮ್ಬುಮ್–ಆದರಿಸುವ, ತಿರುವೇಙ್ಗಡತ್ತಾನೇ–ಶ್ರೀ ವೇಙ್ಕಟಾದ್ರಿಗೆ ಸ್ವಾಮಿಯಾದವನೇ!, ಪೂ ಆರ್–ಪುಷ್ಪಗಳಿಂದ ಭರಿತವಾದ, ಕಳಲ್ಕಳ್–(ನಿನ್ನ) ಪಾದಗಳನ್ನು, ಅರುವಿನೈಯೇನ್–ಮಹಾಪಾಪವುಳ್ಳ ನಾನು, ಪೊರುನ್ದುಮಾಱು–ಸೇರುವಪ್ರಕಾರವನ್ನು, ಪುಣರಾಯೇ–(ನನಗೆ) ಬೋಧಿಸು.

( ಸ–ಗಾ–ರ || )—
ನಿಷ್ಕಾರುಣ್ಯಾನ್ನೃಶಂಸಾನಸುರಕುಲಗಣಾನ್ ಹನ್ತುಮೇವಾಗ್ನಿವಕ್ತ್ರೈ-
ರ್ಬಾಣೈರ್ವರ್ಷನ್ಸುಶಾರ್ಙ್ಗಂ ನನು ವಹಸಿ ಹರೇ! ಶ್ರೀಪತೇ! ದೇವದೇವ ;
ಸೂರೀನ್ದ್ರೈರ್ಮುನೀನ್ದ್ರೈರಪಿ ಮಹಿತತಲೇ ವೇಙ್ಕಟಾದ್ರೌ ಸುಮಾಲೀ-
ವರ್ಷೈಃ ಪೂರ್ಣಂ ಪದಾಬ್ಜಂ ತವ ಗಮಯ ಚ ಮಾಂ ಪಾಪಿನಂ
ತ್ವತ್ಕಟಾಕ್ಷೈಃ ||

ತಾ॥ ಲೋಕವನ್ನೆಲ್ಲಾ ಪೀಡಿಸುವ ರಾಕ್ಷಸರ ಪ್ರಾಣಾಪಹರಣಕ್ಕಾಗಿ ತೀವ್ರ ಬಾಣವರ್ಷವಂಮಾಡುವ ಶಾಙ್ಗ್ರಧಾರಿಯೇ!, ಲಕ್ಷ್ಮೀವಲ್ಲಭನೇ !, ದಿವ್ಯತೇಜೋ ಮೂರ್ತಿಯೇ!, ದೇವಮುನಿಗಣಾರ್ಚಿತನಾದ ಶ್ರೀ ವೇಙ್ಕಟಾದ್ರಿಗೆ ಸ್ವಾಮಿಯಾದ ವನೇ!, ಪುಷ್ಪಭರಿತವಾದ (ಸರ್ವಾರಾಧಿತವಾದ) ನಿನ್ನ ಪಾದಗಳನ್ನು ಮಹಾ ಪಾಪಿಯಾದ ನಾನು ಸೇರುವ ಪ್ರಕಾರವನ್ನು ನನಗೆ ಬೋಧಿಸು.

(೫೧) ಪುಣರಾನಿನ್ಱ ಮರಮೇೞೆಯ್ದ ವೊರುವಿಲ್ ವಲವಾವೋ,
ಪುಣರೇಯ್‌ನಿನ್ಱ ಮರಮಿರಣ್ಡಿನ್ ನಡುವೇ ಪೋನ
ಮುದಲ್ವಾವೋ,
ತಿಣರಾರ್ ಮೇಕಮೆನಕ್ಕಳಿಱುಶೇರುಮ್ ತಿರುವೇಙ್ಗಡತ್ತಾನೇ
ತಿಣರಾರ್ ಶಾಙ್ಗ್ರತ್ತುನಪಾದಮ್ ಶೇರ್ವದಡಿಯೇನೆನ್ನಾಳೇ.

ಪ್ರ॥ ಪುಣರಾನಿನ್ಱ-ಚೆನ್ನಾಗಿ ಒಂದಕ್ಕೊಂದು (ಗುರಿಗೆ ಲಕ್ಷ್ಯವಾಗದಂತೆ) ಸೇರಿರುವ, ಮರಮೇೞು-ಮರಗಳು ಏಳನ್ನೂ, ಅನ್ಱು-(ಸುಗ್ರೀವನು ಸನ್ದೇಹಪಟ್ಟ) ಆ ಕಾಲದಲ್ಲಿ, ಎಯ್ದ - (ಅವನಿಗೆ ವಿಶ್ವಾಸವುಂಟಾಗುವಂತೆ) ಭೇದಿಸಿದ, ಒರು- ಅದ್ವಿತೀಯನಾದ, ವಿಲ್‌ವಲವಾವೋ-ಧನುರ್ಧಾರಿಯೇ !, ಪುಣರೇಯ್ ನಿನ್ಱ- ಹೊಂದಿಕೊಂಡು (ಒಂದೇ ಮರವಾಗಿರುವಂತೆ) ನಿಂತಿರುವ, ಮರಮ್ ಇರಣ್ಡಿನ್- ಮರಗಳೆರಡರ (ಯಮಳಾರ್ಜುನ ವೃಕ್ಷಗಳ), ನಡುವೇ-ಮಧ್ಯದಲ್ಲಿ, ಪೋನ-ನುಗ್ಗಿ ಹೋದ, ಮುದಲ್ವಾ-ಜಗತ್ಕಾರಣಭೂತನೇ !, ತಿಣರ್ ಆರ್-ಅತಿಘನತೆಯೊಡನೆ ಕೂಡಿದ, ಮೇಕಮೆನ-ಮೇಘಗಳೋ ಎಂಬಂತೆ, ಕಳಿಱು-ಆನೆಗಳು, ಶೇಱುಮ್- ಸೇರುವ, ತಿರುವೇಙ್ಗಡತ್ತಾನೇ - ಶ್ರೀ ವೇಙ್ಕಟಾದ್ರಿಗೆ ಸ್ವಾಮಿಯಾದವನೇ, ತಿಣರಾರ್-ಮಹಾಮಹಿಮೆಯುಳ್ಳ, ಶಾಙ್ಗ್ರತ್ತು-ಧನುಸ್ಸನ್ನು ಧರಿಸಿರುವ, ಉನ- ನಿನ್ನ, ಪಾದಮ್-ಪಾದಗಳನ್ನು, ಅಡಿಯೇನ್-ದಾಸನಾದ ನಾನು, ಶೇರ್ವದು-ಸೇರು ವುದು, ಎನ್ನಾಳ್-ಯಾವಾಗ ? ಓ ! ಓ !-ಅಯ್ಯೋ ! ಅಯ್ಯೋ !

( ಸ-ಗಾ-ರ ॥ )—

ಹೇ ಧನ್ವಿನ್ ! ಗಾಢಬನ್ಧಾನಪಿ ಸಪದಿ ತದಾ ಸಪ್ತವೃಕ್ಷಾನ್ವಿಕೃತ್ಯ
ಪ್ರಖ್ಯಾತಸ್ಸಾನ್ದ್ರವೃಕ್ಷದ್ವಯಮಪಿ ಚ ವಿಶನ್ನನ್ತರಾಽಸ್ಯಾದಿಮೂಲ ! ।
ನಾಥ ! ಶ್ರೀವೇಙ್ಕಟಾದ್ರೌ ಪೃಥುಜಲದಸಮೈರ್ಹಸ್ತಿಭಿಸ್ಸೇವಿತೇಽಸ್ಮಿನ್
ಶ್ರೀಶಾಙ್ಗ್ರಂ ಬಿಭ್ರತಸ್ತೇ ಪದಕಮಲಯುಗೇ ಕಿಙ್ಕರಸ್ಸ್ಯಾಂ ಕದಾ ವಾ? ॥

ತಾ|| ಸಪ್ತಸಾಲಚ್ಛೇದವಂ ಮಾಡಿದ ಧನುರ್ಧಾರಿಯೇ !, ಯಮಳಾರ್ಜುನ ಭಞ್ಜನವಂ ಮಾಡಿದ ಜಗತ್ಕಾರಣಭೂತನೇ !, ನೀಲಮೇಘಗಳಂತೆ ಇರುವ ಆನೆಗಳು ಗುಂಪಾಗಿ ಸೇರುವ ಶ್ರೀ ವೇಙ್ಕಟಾದ್ರಿಯಲ್ಲಿ ವಾಸಮಾಡುವ ಸ್ವಾಮಿಯೇ ! ಮಹಾ ಧನುರ್ಧಾರಿಯಾದ ನಿನ್ನ ಪಾದಗಳನ್ನು ದಾಸಭೂತನಾದ ನಾನು ಸೇರುವುದು ಯಾವಾಗ ? (ಅಯ್ಯೋ ! ಅಯ್ಯೋ !—ಎಂದು ಮನಸ್ಸಿನ ತಾಪವನ್ನು ಸೂಚಿಸುತ್ತಾರೆ.)

(೬) ಎನ್ನಾಳೇ ನಾಮ್ ಮಣ್ಣಳನ್ದ ಇಣೈತ್ತಾಮರೈಕಳ್
ಕಾಣ್ಬದತ್ಕು,
ಎನ್ನಾಳುಮ್ ನಿನ್ಱಿಮೈಯೋರ್‌ಕಳೇತ್ತಿ ಯಿಱೈಞ್ಜಿ
ಯಿನಮಿನಮಾಯ್,
ಮೆಯ್ನ್ನಾಮನತ್ತಾಲ್ ವೞಿಪಾಡುಶೆಯ್ಯುಮ್
ತಿರುವೇಙ್ಗಡತ್ತಾನೇ,
ಮೆಯ್ನ್ನಾನೆಯ್‌ದಿ ಯೆನ್ನಾಳುನ್ನಡಿಕ್ಕಳಡಿಯೇನ್
ಮೇವುವದೇ.

ಪ್ರ|| ಮಣ್ ಅಳನ್ದ–ಭೂಲೋಕಾದಿ ಲೋಕಗಳನ್ನೆಲ್ಲಾ ಅಳೆದ, ಇಣೈತ್ತಾಮರೈಕಳ್–ಎರಡು ಚರಣಾರವಿನ್ದಗಳನ್ನೂ, ನಾಮ್–ನಾವು, ಕಾಣ್ಬದಱ್ಕು–ನೋಡುವುದಕ್ಕೆ, ಎನ್ನಾಳೇ–ಯಾವದಿನವೋ, ಎನ್ಱು–ಎಂದು, ಇಮೈಯೋರ್‌ಕಳ್–ನಿತ್ಯಸೂರಿಗಳು, ಎನ್ನಾಳುಮ್–ಸರ್ವಕಾಲದಲ್ಲೂ, ನಿನ್ಱು–ನಿಂತು, ಏತ್ತಿ–ಸ್ತೋತ್ರ ಮಾಡಿ, ಇಱೈಞ್ಜಿ–ಪ್ರಾರ್ಥಿಸಿ (ನಮಸ್ಕರಿಸಿ), ಇನಮಿನಮಾಯ್–ಗುಂಪು ಗುಂಪಾಗಿ, ಮೆಯ್ನ್ನಾಮನತ್ತಾಲ್–ಶರೀರ ವಾಙ್ಮನಸ್ಸುಗಳಿಂದ, ವೞಿಪಾಡು–ಸೇವೆಯನ್ನು, ಶೆಯ್ಯುಮ್–ಮಾಡುವ, ತಿರುವೇಙ್ಗಡತ್ತಾನೇ–ಶ್ರೀವೇಙ್ಕಟಾದ್ರಿಯಲ್ಲಿ ವಾಸಮಾಡುವವನೇ !, ಅಡಿಯೇನ್–ದಾಸನಾದ ನಾನು, ಮೆಯ್–ಶರೀರದೊಡನೆ, ಎಯ್‌ದಿ–ಸಮೀಪಿಸಿ, ಉನ್–ನಿನ್ನ, ಅಡಿಕ್ಕಳ್–ಪಾದಗಳಲ್ಲಿ, ಮೇವುವದು–ಸೇರುವುದು, ಎನ್ನಾಳ್–ಯಾವಾಗ ?

( ಸ-ಗಾ-ರ ॥ )—

ಪದ್ಮದ್ವನ್ದ್ವಂ ಕದಾ ವಾ ವಯಮಿಹ ಜಗತಾಂ ಮಾನದಕ್ಷನ್ತು ಧನ್ಯಾಃ
ಪಶ್ಯಾಮಶ್ಚೇತಿ ದೇವಾಸ್ಸತತಮಪಿ ತವ ಸ್ತೋತ್ರಸಕ್ತಾ ಭಜನ್ತಿ ।
ಸರ್ವೇ ತ್ವಾಮೇವ ಸತ್ಯಂ ತ್ರಿಕರಣತ ಇಹ ಶ್ರೀಶ ಭೋ ! ವೇಙ್ಕಟೇಶ !
ತ್ವತ್ಪಾದಾಬ್ಜೇ ಕದಾ ವಾ ಮಮ ಭವತಿ ವಿಭೋ ! ಕಿಙ್ಕರಸ್ಯೈವ
ದಾಸ್ಯಮ್ ? ॥

ತಾ॥ ಭೂಲೋಕಾದಿ ಸಕಲ ಲೋಕಗಳನ್ನೂ ಅಳೆದ ಪಾದಾರವಿನ್ದಯುಗಳ ವನ್ನು ನಾವು ನೋಡುವ ದಿನವು ಯಾವಾಗ—ಎಂದು ನಿತ್ಯಸೂರಿಗಳು ಸರ್ವ ಕಾಲದಲ್ಲೂ ನಿಂತು ಸ್ತುತಿಸಿ ನಮಸ್ಕರಿಸಿ, ಮನೋವಾಕ್ಕಾಯಗಳಿಂದ ಸೇವೆ ಮಾಡುವ ಶ್ರೀವೇಙ್ಕಟಾದ್ರಿಯ ಸ್ವಾಮಿಯೇ ! ದಾಸನಾದ ನಾನು ಈ ಶರೀರ ದೊಡನೆ ನಿನ್ನನ್ನು ಸಮೀಪಿಸಿ ನಿನ್ನ ಪಾದಗಳಲ್ಲಿ ಸೇರುವುದು ಯಾವಾಗ ?

(೨) ಅಡಿಯೇನ್ ಮೇವಿಯಮರ್‌ಕಿನ್ತ ಅಮುದೇ
ಯಿಮೈಯೋರದಿಪತಿಯೇ,
ಕೊಡಿಯಾವಡು ಪುಳ್ಳುಡೈಯಾನೇ ಕೋಲಕ್ಕನಿವಾಯ್
ಪ್ಪೆರುಮಾನೇ,
ಶೆಡಿಯಾರ್ ವಿನೈಕಳ್‌ತೀರ್ ಮರುನ್ದೇ
ತಿರುವೇಙ್ಗಡತ್ತೆಮ್ಪೆರುಮಾನೇ,
ನೊಡಿಯಾರ್ ಪೊೞುದುಮುನಪಾದಮ್ ಕಾಣ
ನೋಲಾದಾಱ್ರೇನೇ.

ಪ್ರ॥ ಅಡಿಯೇನ್-ದಾಸನಾದ ನಾನು, ಮೇವಿ-ಆಶ್ರಯಿಸಿ, ಅಮರ್‌ಕಿನ್ತ-ನಿರನ್ತರವಾಗಿ ಅನುಭವಿಸಬೇಕಾಗಿರುವ, ಅಮುದೇ-(ಭೋಗ್ಯವಾದ) ಅಮೃತವೇ!, ಇಮೈಯೋರ್ ಸೂರಿಗಳಿಗೂ, ಅದಿಪತಿಯೇ ಸ್ವಾಮಿಯಾದವನೇ!, ಅಡು-ಶತ್ರು ಧ್ವಂಸಕನಾದ, ಪುಳ್ ಗರುಡನನ್ನು, ಕೊಡಿಯಾ-ಧ್ವಜವಾಗಿ, ಉಡೈಯಾನೇ-ಉಳ್ಳವನೇ!, ಕೋಲ-ಸುನ್ದರವಾದ, ಕನಿವಾಯ್-ಬಿಂಬಾಧರವುಳ್ಳ, ಪೆರುಮಾನೇ-ಸ್ವಾಮಿಯೇ!, ಶೆಡಿ ಆರ್-ಗುಲ್ಮಗಳಂತೆ ಅಪಾರವಾಗಿ ಬೆಳೆದಿರುವ, ವಿನೈಕಳ್-ಪಾಪಗಳನ್ನು, ತೀರ್-ನಾಶಪಡಿಸಿ ತೀರಿಸುವುದಕ್ಕೆ, ಮರುನ್ದೇ-ದಿವ್ಯೌಷಧವೇ! ತಿರುವೇಙ್ಗಡತ್ತು-ಶ್ರೀ ವೇಙ್ಕಟಾದ್ರಿಯಲ್ಲಿ ವಾಸಮಾಡುತ್ತಿರುವ, ಎಮ್ಪೆರುಮಾನೇ-

ನನ್ನ ಸ್ವಾಮಿಯೇ! ಉನಪಾದಮ್‌ಕಾಣ-ನಿನ್ನ ಪಾದಗಳನ್ನು ನೋಡುವುದಕ್ಕೆ, ನೋಲಾದು ವ್ರತಾಚರಣವಂ ಮಾಡದೆ, ನೊಡಿ ಆರ್ ಪೊಱುದುಮ್-ಕ್ಷಣಮಾತ್ರ ಕಾಲವೂ, ಆಱ್ರೇ‌-ಸಹಿಸಲಾರೆನು.

( ಸ-ಗಾ-ರ ॥ )—

ಸೂರೀನ್ದ್ರ! ತ್ವಂ ಹಿ ಭಕ್ತ್ಯಾ ಸತತಮಪಿ
ಮಯಾಽತ್ರಾನುಭಾವ್ಯೋಽಮೃತಾಬ್ಧಿ-
ಶ್ಯಾಮ್ರೂಷ್ಮಃ ಪಕ್ಷಿರಾಜೋ ಧ್ವಜ ಇಹ ಕಿಲ ತೇ ನಾಥ!
ಬಿಮ್ಬಾಧರೋಽಸಿ।
ಪಾಪಾಟವ್ಯಾಃ ಕುಠಾರ! ತ್ವಮಿಹ ವಿಲಸಸಿ ಶ್ರೀಧರೋ
ವೇಙ್ಕಟಾದ್ರೌ
ತ್ವತ್ಪಾದಾಬ್ಜಾವಲೋಕಂ ಕ್ಷಣಮಪಿ ನ ಸಹೇ
ತ್ಯಕ್ತುಮತ್ಯುತ್ಸುಕೋಽಹಮ್ ॥

ತಾ॥ ದಾಸನಾದ ನಾನು ನಿರನ್ತರಾನುಭವ ಮಾಡತಕ್ಕ ಭೋಗ್ಯಾಮೃತ ಸ್ವರೂಪನಾಗಿಯೂ, ನಿತ್ಯಸೂರೀಶ್ವರನಾಗಿಯೂ, ಗರುಡಧ್ವಜನಾಗಿಯೂ, ಬಿಂಬಾ ಧರವುಳ್ಳವನಾಗಿಯೂ, ಪಾಪಧ್ವಂಸಕ ದಿವ್ಯಾಪಧಪ್ರಾಯನಾಗಿಯೂ ಇರುವ ಶ್ರೀ ವೇಙ್ಕಟಾದ್ರೀಶ್ವರನೇ! ನಿನ್ನ ಪಾದಗಳನ್ನು ನೋಡುವಷ್ಟು ಪುಣ್ಯವಂ ನಾನು ಮಾಡದೆ ಇದ್ದಾಗ್ಯೂ ಒಂದು ಕ್ಷಣಮಾತ್ರವೂ ವಿಲಮ್ಬವನ್ನು ಸಹಿಸಲಾರೆನು.

(೮) ನೋಲಾದಾಱ್ರೇನುನಪಾದಮ್ ಕಾಣವೆನ್ರು
ನುಣ್ಣುಣರ್ವಿಲ್,
ನೀಲಾರ್‌ಕಣ್ಡತ್ತಮ್ಮಾನುಮ್ ನಿತ್ತ್ಯನಾನ್ಮುಕನುಮಿನ್ದಿರನುಮ್,
ಶೇಲೇಯ್‌ಕಣ್ಣಾರ್ ಪಲರ್‌ಶೂೞ ವಿರುಮ್ಬುಮ್
ತಿರುವೇಙ್ಗಡತ್ತಾನೇ,
ಮಾಲಾಯ್‌ಮಯಕ್ಕಿ ಯಡಿಯೇನ್‌ಪಾಲ್
ವನ್ದಾಯ್‌ಪೋಲೇ ವಾರಾಯೇ.

ಪ್ರ॥ ಉನಪಾದಮ್-ನಿನ್ನ ಪಾದಗಳನ್ನು, ಕಾಣ-ನೋಡಲು, ನೋಲಾದು-ವ್ರತವಂಮಾಡದೆ, ಆಱ್ರೇ‌-ಸಹಿಸಲಾರೆನು, ಎನ್ರು-ಎಂದು, ನುಣ್ ಉಣರ್ವಿಲ್-ಸೂಕ್ಷ್ಮಜ್ಞಾನವುಳ್ಳ, ನೀಲಾರ್‌ಕಣ್ಡತ್ತು-ನೀಲಕಂಠವುಳ್ಳ, ಅಮ್ಮಾನುಮ್ -

ಈಶ್ವರನೆಂಬ ರುದ್ರನೂ, ನಿತ್ಯ-ಜ್ಞಾನಶಕ್ತ್ಯಾದಿ ಪೂರ್ಣನಾದ, ನಾನ್ಮುಕನುಮ್-ಚತುರ್ಮುಖನೂ, ಇನ್ದಿರನುಮ್-ಇನ್ದ್ರನೂ, ಶೇಲೇಯ್ ಕಣ್ಣಾರ್-ಮೀನಿನಂತೆ ಸುನ್ದರವಾದ ನೇತ್ರಗಳುಳ್ಳ ದೇವಸ್ತ್ರೀಯರು, ಪಲರ್-ಅನೇಕರು, ಶೂಳ್-ಸುತ್ತಿ ಬಂದು, ವಿರುಮ್ಬುಮ್-ಸಾದರವಾಗಿ ಆಶ್ರಯಿಸುವ, ತಿರುವೇಙ್ಗಡತ್ತಾನೇ-ಶ್ರೀವೇಙ್ಕಟಾದ್ರಿಯಲ್ಲಿ ವಾಸಮಾಡುತ್ತಿರುವ ಸ್ವಾಮಿಯೇ!, ಮಾಲಾಯ್-ವ್ಯಾಮೋಹಜನಕನಾದ ಕೃಷ್ಣನಾಗಿ, ಮಯಕ್ಕಿ - ಎಲ್ಲರನ್ನೂ ಮೋಹಪಡಿಸಿ, ವನ್ದಾಯ್‌ಪೋಲೇ-ಬಂದಂತೆ, ಅಡಿಯೇನ್ಪಾಲ್-ನನ್ನ ಸಮೀಪಕ್ಕೆ, ವಾರಾಯ್-(ನೀನು) ಬರಬೇಕು.

( ಸಂಗ್ರಹ || )—

ತ್ವತ್ಪಾದಾಬ್ಜೋತ್ಸುಕತ್ವಂ ಕ್ಷಣಮಪಿ ನ ಸಹೇ ತ್ವತ್ಕೃತಂ ಚೇತ್ಯುವ ಸೂಕ್ಷ್ಮೇ |
ಜ್ಞಾನೇಶೋ ನೀಲಕಣ್ಠಸ್ಸುಮತಿರಪಿ ಚತುರ್ವಕ್ತ್ರ ಇನ್ದ್ರೋಽಪಿ ರಂಭಾದ್ಯಾಃ-
ದಿವ್ಯಾಸ್ತ್ರೀ ಮೀನನೇತ್ರಾಃ ಪರಿತ ಇಹ ಹರೇ! ವೇಙ್ಕಟಾದ್ರೌ ಭಜನ್ತಿ
ತ್ವಾಮೇವ! ತ್ವಂ ಹಿ ಕಾನ್ತಸ್ಸಕಲಜನಮನೋರಞ್ಜನೋ ಮಾಮುಪೈಹಿ ||

ತಾ|| "ನಿನ್ನ ಪಾದಗಳನ್ನು ನೋಡಲು ವ್ರತಾಚರಣವಂಮಾಡದೆ ಇದ್ದಾಗ್ಯೂ ನಾನು ನಿನ್ನ ದರ್ಶನಕ್ಕೆ ವಿಲಮ್ಬವನ್ನು ಸಹಿಸಲಾರೆನು"—ಎಂದು ಸೂಕ್ಷ್ಮದರ್ಶಿಯಾದ ನೀಲಕಣ್ಠನೂ, ಜ್ಞಾನಾದಿ ಪೂರ್ಣನಾದ ಚತುರ್ಮುಖನೂ, ಇನ್ದ್ರನೂ, ಮೀನಲೋಚನೆಗಳಾದ ದೇವಸ್ತ್ರೀಗಳೂ—ಅನೇಕರು ಸುತ್ತಿಬಂದು (ನಿನ್ನ ಸೇವೆಗಾಗಿ) ಆಶ್ರಯಿಸುವ ಶ್ರೀವೇಙ್ಕಟಾದ್ರಿಯಲ್ಲಿ ನಿತ್ಯವಾಸಮಾಡುವ ಸ್ವಾಮಿಯೇ! ಶ್ರೀಕೃಷ್ಣರೂಪಿಯಾಗಿ ನೀನು ಎಲ್ಲರನ್ನೂ ಮೋಹಪಡಿಸಿ ಬಂದಂತೆ, ಈಗ ದಾಸನಾದ ನನ್ನ ಸಮೀಪಕ್ಕೆ ಬಾ.

(೯) ವನ್ದಾಯ್‌ಪೋಲೇ ವಾರಾದಾಯ್
ವಾರಾದಾಯ್‌ಪೋಲ್ ವರುವಾನೇ,
ಶೆನ್ದಾಮರೈಕ್ಕಣ್ ಶೆಙ್ಗನಿವಾಯ್
ನಾಲ್‌ತೋಳಮುದೇ ಯೆನದುಯಿರೇ,
ತಿನ್ದಾಮಣಿಕಳ್ ಪಕರೆಲ್ಲಿ ಪ್ಪಕಲ್‌ಶೆಯ್
ತಿರುವೇಙ್ಗಡತ್ತಾನೇ,
ಅನ್ದೋ! ಅಡಿಯೇನುನಪಾದಮಕಲಕಿಲ್ಲೇನಿತ್ಯಯುಮೇ.

ಪ್ರ॥ ವನ್ದಾಯ್‌ಪೋಲೇ — (ಅನಾಶ್ರಿತರಿಗೆ) ಸಮಿಾಪಕ್ಕೆ ಬಂದವನಂತೆ, ವಾರಾದಾಯ್-ಬಾರದೆ ಇರುವವನಾಗಿಯೂ, ವಾರಾದಾಯ್‌ಪೋಲೇ-(ಆಶ್ರಿತರಿಗೆ) ಸಮಿಾಪಕ್ಕೆ ಬರದೆ ಇರುವವನಂತೆ, ವರುವಾನೇ-ಬರುವವನಾಗಿಯೂ ಇರುವವನೇ!, ತೆನ್ದಾಮರೈಕ್ಕಣ್-ಕೆಂದಾವರೆಯಂತೆ ಕಣ್ಣುಗಳುಳ್ಳವನಾಗಿಯೂ, ಶೆವ್‌ಕನಿವಾಯ್ -ಕೆಂಪಾದ ಬಿಂಬಫಲದಂತೆ ವಕ್ತ್ರವುಳ್ಳವನಾಗಿಯೂ, ನಾಲ್‌ತೋಳ್ — ನಾಲ್ಕು ತೋಳುಗಳುಳ್ಳ, ಅಮುದೇ — ಅಮೃತದಂತೆ ಭೋಗ್ಯನಾದವನೇ!, ಎನದು ಉಯಿರೇ — ನನ್ನ ಪ್ರಾಣಧಾರಕನೇ, ಶಿನ್ದಾಮಣಿಕಳ್ — ಚಿನ್ತಾಮಣಿಗಳೆಂಬ (ಸರ್ವಮನೋರಥಪೂರ್ತಿಮಾಡುವ) ಮಹಾರತ್ನಗಳ, ಪಕರ್ — ಕಾನ್ತಿಯು, ಅಲ್ಲೈ-ರಾತ್ರಿಯನ್ನು, ಪಕಲ್‌ಶೆಯ್-ಹಗಲಾಗಿ ಮಾಡುವ, ತಿರುವೇಙ್ಗಡತ್ತಾನೇ -ಶ್ರೀ ವೇಙ್ಕಟಾದ್ರಿಯ ಸ್ವಾಮಿಯೇ!, ಅನ್ದೋ-ಅಯ್ಯೋ!, ಉನಪಾದಮ್- ನಿನ್ನ ಪಾದಗಳನ್ನು, ಅಡಿಯೇಱ — ದಾಸನಾದ ನಾನು, ಇಱ್ಪೈಯುಮ್-ಒಂದು ಕ್ಷಣವೂ, ಅಕಲಕಿಲ್ಲೇಱ-ಅಗಲಿ ಇರಲಾರೆನು.

(ಸ್ರ—ಗ್ಧ—ರಾ ॥)—

ಆಯಾತೋಽಪ್ಯತ್ರ ನ ತ್ವಂ ಕಿಲ ನಯನಪಥೇ ವರ್ತಸೇ ನಾಗತೋಽಪಿ
ಪ್ರತ್ಯಕ್ಷಂ ತಿಷ್ಠಸಿ ತ್ವಂ ದ್ವಿಯುಗಭುಜ! ಸರೋಜಾಕ್ಷ! ಬಿಮ್ಬಾಧರೋಽಸಿ।
ಮತ್ಪ್ರಾಣೇಶಾಮೃತಾಬ್ಧೇ। ನಿಶಮಪಿ ದಿವಸಂ ಚಾತ್ರ ಚಿನ್ತಾಮಣೀನ್ದ್ರಾಃ
ಕುರ್ವನ್ತಿ ವೇಙ್ಕಟಾದ್ರೌ! ನ ಹಿ ತವ ವಿರಹಂ ಜಾತು ಸೋಢುಂ
ಕ್ಷಮೋಽಸ್ಮಿ ॥

ತಾ॥ ಅನಾಶ್ರಿತರಿಗೆ ದುರ್ಲಭನಾಗಿಯೂ, ಆಶ್ರಿತರಿಗೆ ಸುಲಭನಾಗಿಯೂ ಇರುವವನೇ! ಪುಣ್ಡರೀಕಾಕ್ಷನಾಗಿಯೂ ಬಿಂಬಾಧರವುಳ್ಳವನಾಗಿಯೂ, ಚತುರ್ಭುಜವುಳ್ಳವನಾಗಿಯೂ ಅಮೃತಪ್ರಾಯನಾದವನೇ! ನನ್ನ ಪ್ರಾಣಧಾರಕನೇ! ಚಿನ್ತಾಮಣಿಗಳಿಂದ ಶೋಭಿತವಾಗಿ ರಾತ್ರಿಯೂ ಹಗಲಿನಂತೆ ಪ್ರಕಾಶಿಸುತ್ತಿರುವ ಶ್ರೀ ವೇಙ್ಕಟಾದ್ರಿಯ ಸ್ವಾಮಿಯೇ! ಅಯ್ಯೋ! ನಿನ್ನ ಪಾದಗಳನ್ನು ದಾಸನಾದ ನಾನು ಒಂದು ಕ್ಷಣಮಾತ್ರವೂ ಅಗಲಿ ಇರಲಾರೆನು.

(೧೦) ಅಕಲಕಿಲ್ಲೇನಿಱೈಯುಮೆನ್ಱಲರ್‌ಮೇಲ್
ಮಙ್ಗೈಯುಱೈಮಾರ್ಬಾ,
ನಿಕರಿಲ್ಲಾಪುಕಳ್ಙಾಯುಲಕಮ್ ಮೂನ್ಱುಡೈಯಾಯೆನ್ನೈಯಾಳ್ವಾನೇ,
ನಿಕರಿಲಮರರ್ ಮುನಿಕ್ಕಣಙ್ಗಳ್ ವಿರುಮ್ಬುಮ್
ತಿರುವೇಙ್ಗಡತ್ತಾನೇ,
ಪುಕಲೊನ್ಱಿಲ್ಲಾವಡಿಯೇನುನ್ನಡಿಕ್ಕೀೞಮರ್‌ನ್ದು ಪುಕುನ್ದೇನೇ.

ಪ್ರ॥ ಇತ್ತ್ಯಯುಮ್-ಒಂದು ಕ್ಷಣವೂ, ಅಕಲ-ಬಿಟ್ಟು ಇರಲು, ಕಿಲ್ಲೇ-ನಾನು ಶಕ್ತಿಯುಳ್ಳ, ಎನ್ರು-ಎಂದು, ಅಲರ್ ಮೇಲ್ ಮಙ್ಗೈ-ಪದ್ಮವಾಸಿನಿಯಾದ ಲಕ್ಷ್ಮೀದೇವಿಯು, ಉತ್ತ್ರೈ-ನಿತ್ಯವಾಸಮಾಡುವ, ಮಾರ್ಬಾ-ವಕ್ಷಸ್ಸ್ಥಲವುಳ್ಳವನೇ!, ನಿಕರಿಲ್-ಸಮಾನವಿಲ್ಲದ, ಪುಕಳ್ಳಾಯ್ - ದಿವ್ಯಕೀರ್ತಿಯುಳ್ಳವನೇ!, ಮೂನ್ರು ಉಲಕಮ್ - ತ್ರಿವಿಧ ಚೇತನಾಚೇತನ ಪ್ರಪಞ್ಚಗಳನ್ನೂ, ಉಡೈಯಾಯ್-ಪಡೆದಿರುವ ಸ್ವಾಮಿಯೇ!, ಎನ್ನೈ ಆಳ್ವಾನೇ-ನನ್ನನ್ನು ಆಳುವವನೇ!, ನಿಕರಿಲ್-ಅನ್ಯಾದೃಶರಾದ, ಅಮರರ್-ದೇವವರ್ಗಗಳೂ (ದಿವ್ಯಸೂರಿಗಳೂ), ಮುನಿಕ್ಕಣಙ್ಗಳ್-ಋಷಿಗಣಗಳೂ, ವಿರುಮ್ಬುಮ್-ಆದರದೊಡನೆ ಬಂದು ಆಶ್ರಯಿಸುವ, ತಿರುವೇಙ್ಗಡತ್ತಾನೇ - ಶ್ರೀವೇಙ್ಕಟಾದ್ರಿಯಲ್ಲಿ ವಾಸಮಾಡುವ ಸ್ವಾಮಿಯೇ!, ಪುಕಲ್-ಶರಣ್ಯಾನ್ತರವು, ಒನ್ರಿಲ್ಲಾ-ಒಂದೂ ಇಲ್ಲದ, ಅಡಿಯೇನ್-ದಾಸನಾದ ನಾನು, ಉನ್ನಡಿಕ್ಕೀಳ್-ನಿನ್ನ ಪಾದಗಳ ಕೆಳಗೆ, ಅಮರ್ನ್ದು - ಸೇರಿಕೊಂಡು, ಪುಕುನ್ದೇನ್-ಪ್ರವೇಶಿಸಿದೆನು.

( ಸ-ಗಾ-ರ ॥ )—

ವಿಶ್ಲೇಷಂ ನ ಕ್ಷಣಂ ಚ ಸ್ವಯಮುಹಹ! ಸಹೇ ಚೇತಿ ಪದ್ಮಾ ತವೋರ-
ಸ್ಯಾಸ್ತೇ ನಿತ್ಯಂ ಸಮಸ್ತಾಮಲಸುಗುಣನಿಧೇ! ನಾಥ ಮೇ ಲೋಕನಾಥ ! |
ದೇವೈಶ್ಶ್ರೇಷ್ಠೈರ್ಮುನೀನ್ದ್ರೈರಪಿ ಮಹಿತತಮೋ ವೇಙ್ಕಟಾದ್ರೌ ವಿಭಾಸಿ
ತ್ವತ್ಪಾದಾಬ್ಜಂ ಪ್ರವಿಷ್ಟೋಽಸ್ಮ್ಯಹಮಿಹ ಸತತಂ
ದಾಸಭೂತೋಽಸ್ಮ್ಯನಾಥಃ ॥

ತಾ॥ "ಒಂದು ಕ್ಷಣವೂ ನಿನ್ನನ್ನು ಅಗಲಿ ಇರಲಾರೆನು"—ಎಂದು ನಿನ್ನ ವಕ್ಷಸ್ಸ್ಥಲದಲ್ಲಿ ನಿತ್ಯವಾಸಮಾಡುವ ಲಕ್ಷ್ಮೀದೇವಿಗೆ ಪ್ರಾಣವಲ್ಲಭನಾಗಿಯೂ, ದಿವ್ಯ ಮಹಿಮಾತಿಶಯಕೀರ್ತಿಯುಕ್ತನಾಗಿಯೂ, ತ್ರಿವಿಧ ಪ್ರಪಞ್ಚನಾಯಕನಾಗಿಯೂ, ನನ್ನ ಸ್ವಾಮಿಯಾಗಿಯೂ, ದೇವತಾ ಮುನಿಗಣಾದಿಗಳಿಂದ ಆದೃತವಾದ ಶ್ರೀ ವೇಙ್ಕಟಾದ್ರಿಯಲ್ಲಿ ವಾಸಮಾಡುವವನಾಗಿಯೂ ಇರುವ ಸ್ವಾಮಿಯೇ! ರಕ್ಷಕಾನ್ತರವಿಲ್ಲದ (ಅನಾಥನಾದ) ದಾಸನಾದ ನಾನು ನಿನ್ನ ಪಾದಗಳ ಕೆಳಗೆ (ಧೂಳಿಯಂತೆ) ಸೇರಿಕೊಂಡು ಪ್ರವೇಶಿಸಿ ಇರುತ್ತೇನೆ.

(೧೧) ಅಡಿಕ್ಕೀೞಮರ್ನ್ದು ಪುಕುನ್ದಡಿಯೀರ್ ವಾೞ್ಮಿನೆನ್ಱೆನ್ಱರುಳ್
ಕೊಡುಕ್ಕುಮ್,
ಪಡಿಕ್ಕೀೞಿಲ್ಲಾಪ್ಪೆರುಮಾನೈ ಪ್ಪೞನಕ್ಕುರುಕೂರ್
ಚ್ಚಡಕೋಪನ್,
ಮುಡಿಪ್ಪಾನ್ ಶೊನ್ನವಾಯಿರತ್ತು
ತ್ತಿರುವೇಙ್ಗಡತ್ತುಕ್ಕಿವೈಪತ್ತುಮ್,
ಪಿಡಿತ್ತಾರ್ ಪಿಡಿತ್ತಾರ್ ವೀಱ್ಱಿರುನ್ದು
ಪೆರಿಯವಾನುಳ್ ನಿಲಾವುವರೇ.

ಪ್ರ॥ ಅಡಿಯೀರ್-ದಾಸಭೂತರಾದವರೇ !, ಅಡಿಕ್ಕೀೞ್-ನಮ್ಮ ಪಾದಗಳ ಕೆಳಗೆ, ಅಮರ್ನ್ದು – ಸೇರಿಕೊಂಡು, ಪುಕುನ್ದು – (ನಿರ್ಭಯವಾಗಿ) ಪ್ರವೇಶಿಸಿ, ವಾೞ್ಮಿನ್-ಬಾಳಿರಿ, ಎನ್ಱು ಎನ್ಱು-ಎಂದು ಹೇಳಿ ಹೇಳಿ, ಅರುಳ್ಕೊಡುಕ್ಕುಮ್-ತನ್ನ ಅನುಗ್ರಹವನ್ನು ಕೊಡುವ, ಪಡಿ-ರೀತಿಗೆ, ಕೀೞಿಲ್ಲಾ-ಸಮಾನವಿಲ್ಲದ, ಪೆರುಮಾನೈ – ಸರ್ವೇಶ್ವರನನ್ನು ಸ್ತುತಿಸಲು, ಪೞನ – ಸಸ್ಯಕ್ಷೇತ್ರಭರಿತವಾದ, ಕುರುಕೂರ್-ಕುರುಕಾಪುರಿಯ, ಶಡಕೋಪನ್-ಶ್ರೀ ಶಠಾರಿಮುನಿಯು, ಮುಡಿಪ್ಪಾನ್-ಪೂರ್ತಿಮಾಡಬೇಕೆಂದು, ಶೊನ್ನ-ರಚಿಸಿದ, ಆಯಿರತ್ತು – ಸಹಸ್ರ ಪದ್ಯಮಾಲೆಯೊಳು, ತಿರುವೇಙ್ಗಡತ್ತುಕ್ಕು-ಶ್ರೀವೇಙ್ಕಟಾದ್ರಿಗೆ ಸೇರಿದ, ಇವೈಪತ್ತುಮ್-ಈ ಹತ್ತು ಪದ್ಯಗಳನ್ನು, ಪಿಡಿತ್ತಾರ್-ಆಶ್ರಯಿಸಿ ಪಠಿಸುವವರನ್ನು, ಪಿಡಿತ್ತಾರ್-ಆಶ್ರಯಿಸುವವರೂ ಕೂಡ, ಪೆರಿಯವಾನುಳ್ – ಪರಮಪದದಲ್ಲಿ, ವೀಱ್ಱಿರುನ್ದು-ನಿತ್ಯವಾಸಮಾಡಿ, ನಿಲಾವುವರೇ-ಶಾಶ್ವತವಾಗಿ ಅನುಭವಿಸುತ್ತಿರುವರು.

( ಸ-ಗಾ-ರ ॥ )—

**ಲೋಕಾ ಉಜ್ಜೀವಿತಾಸ್ಸ್ಯುಃ ಸ್ವಯಮಿಹ ಮಮ ಪಾದಾಬ್ಜಯುಗ್ಮಂ ಶ್ರಿತಾಸ್ಸ್ಯುರಿ-**
**ತ್ಯುಕ್ತ್ವಾ ನಿತ್ಯಂ ಪ್ರಸನ್ನಂ ಪ್ರಭುಮಿಹ ಕುರುಕಾಪತ್ತನೇಶಶ್ಶಠಾರಿಃ |**
**ಸ್ತೋತುಂ ಶ್ರೀವೇಙ್ಕಟೇಶಂ ದಶಕಮಿದಮಪಿ ಪ್ರಾಹ ಮುಕ್ತ್ಯೈ ಸಹಸ್ರೇ**
**ಪ್ರಾತ್ಯಾಣಾಮಸ್ಯ ಭಕ್ತಾ ಅಪಿ ಪರಮಪದೇ ನಿತ್ಯವಾಸಂ ಭಜನ್ತೇ ॥**

ತಾ॥ "ದಾಸಭೂತರಾದವರೇ ! ನಮ್ಮ ಪಾದಗಳ ಕೆಳಗೆ ಸೇರಿಕೊಂಡು ನಿರ್ಭಯವಾಗಿ ಬಾಳಿರಿ"—ಎಂದು ಹೇಳಿ ಹೇಳಿ ತನ್ನ ಅನುಗ್ರಹವನ್ನು ಕೊಡುವ

ಅಸದೃಶನಾದ ಸರ್ವೇಶ್ವರನನ್ನು ಸ್ತುತಿಸಲು, ಸಸ್ಯಕ್ಷೇತ್ರಭರಿತವಾದ ಶ್ರೀಕುರುಕಾಪುರಿಯ ಶಠಾರಿಮುನಿಯು ಉದ್ದೇಶಪೂರ್ವಕವಾಗಿ ರಚಿಸಿ ಇರುವ ಸಹಸ್ರ ಪದ್ಯಾವಳಿಯಲ್ಲಿ ಶ್ರೀವೇಙ್ಕಟಾದ್ರಿಗೆ ಸೇರಿದ ಈ ದಶಕವನ್ನು ಪಠಿಸುವವರ ಭಕ್ತರು ಪರಮಪದದಲ್ಲಿ ನಿತ್ಯವಾಸವಂ ಮಾಡಿ ಶಾಶ್ವತವಾದ ಆನನ್ದಾನುಭವವಂ ಪಡೆಯುವರು.

( ದ್ರ–ಉ–ಸಂ ॥ )—

ಆರ್ತೇಸ್ತಥಾಗತತಯಾ ಮುನಿರಬ್ಜವಾಸಾ-
ಮಾಶ್ರಿತ್ಯ ಸಙ್ಘಟನಕರ್ಮಣಿ ಜಾಗರೂಕಾಮ್ ।
ಆವೇದ್ಯ ಚಾಧಿದಶಮಂ ಸ್ವಮಕಿಞ್ಚನತ್ವಂ
ಶ್ರೀವೇಙ್ಕಟೇಶಚರಣೌ ಶರಣಂ ಪ್ರಪೇದೇ ॥

(ದ್ರ–ಉ–ತಾ-ರ ॥ )—

ಆಪತ್ಸಂರಕ್ಷಣಾರ್ಥೈಕಶರಣತಯಾ ಮೇಘಸಾಮ್ಯಾದಿಭೂಮ್ನಾ
ಸ್ವಾನಾಂ ವಿಶ್ವಾಸದಾನಾತ್ ಸುರಗಣಭಜನಾದ್ದಿವ್ಯದೇಶೋಪಸತ್ತ್ಯಾ ।
ಪ್ರಾಪ್ಯಾಪ್ರಾಪ್ಯತ್ವಯೋಗಾತ್ ಸ್ವಜನವಿಜನಯೋಸ್ಸತ್ತ್ವಸತ್ತ್ವಪ್ರಭಾವಾ-
ದೂಚೇ ನಾಥಂ ಶರಣ್ಯಂ ಶ್ರುತಿಶತವಿದಿತಂ ವೇಙ್ಕಟೇಶಂ ಶಠಾರಿಃ ॥

ಇತ್ಥಂ ಸದ್ವಾರಗಮ್ಯಂ ಸ್ವಯಮಿತಪ-ಸಹಸ್ರಾಯಿನಾಂ ಯೋಜನಾರ್ಹಂ
ಶರ್ವನ್ತಂ ಸ್ವೈಶ್ಚರಿತ್ರೈರ್ವಿಘಟಿತವಿಜನಂ ಸ್ವಾನ್ವಿತಸ್ತ್ರೀಯದೀಕ್ಷಮ್ ।
ಧೃತ್ವಾದೀನಾಂ ನಿದಾನಂ ಘಟಕಪರಮಹಾಭೂತಿಯುಗ್ಮಂ ಶಠಾರಿ-
ರ್ವೈಘಟ್ಯಸ್ಯಾಪ್ಯನರ್ಹಂ ಪ್ರಪದನಸುಲಭಂ ಪ್ರಾಹ ಪಶ್ಯೇ ಶರಣ್ಯಮ್ ॥

(ಈ ದಶಮದಶಕದ ಸಾರಾಂಶ)—

ಈ ಹತ್ತನೆಯ ದಶಕದಲ್ಲಿ—ಶ್ರೀ ಶಠಾರಿಮುನಿವರ್ಯರು ಶ್ರೀಭಗವನ್ತನಲ್ಲಿ ತಮ್ಮ ಪ್ರಾರ್ಥನೆಯು ಸಫಲವಾಗಲಿಲ್ಲವೆಂದು ಖಿನ್ನರಾಗಿ, ತಮ್ಮ ಆಕಿಞ್ಚನ್ಯವನ್ನು ಪುರುಷಕಾರಭೂತೆಯಾದ ಲಕ್ಷ್ಮೀದೇವಿಯ ಮೂಲಕ ತಿಳಿಯಪಡಿಸಿ ಆವನ ಕೃಪೆಗೆ ಪಾತ್ರರಾಗಬೇಕೆಂದು ನಿರ್ಣಯಿಸಿ, ಶ್ರೀ ವೇಙ್ಕಟಾದ್ರೀಶ್ವರನಲ್ಲಿ ಶರಣಾಗತಿಯನ್ನು ಮಾಡಿ ಅನನ್ದಿಸಿರುತ್ತಾರೆ.

(ಈ ಷಷ್ಠ ಶತಕದ ಸಾರಾಂಶ—)

ಈ ಷಷ್ಠಶತಕದಲ್ಲಿ— (೧) ಸರ್ವೇಶ್ವರನ ಅಖಿಲಜಗದ್ರಕ್ಷಕತ್ವವೂ (೨) ಅತ್ಯುಜ್ಜ್ವಲ ದಿವ್ಯಾಯುಧತ್ವವೂ (೩) ಅನುಭಾವ್ಯತ್ವಾತಿಶಯವೂ (೪) ವಿರೋಧಿನಿವರ್ತಕಶ್ರೀಮತ್ತ್ವವೂ (೫) ಅನಾಯಾಸ ವ್ಯಾಪಾರವೂ (೬) ಸರ್ವಾರಾಧ್ಯತ್ವವೂ (೭) ಸಾರಸ್ಯಾತಿಶಯವೂ (೮) ಸರ್ವದೇವಾಧಿದೇವತ್ವವೂ (೯) ಅವಯವಕಾನ್ತಿಯೂ (೧೦) ಸರ್ವಾಶ್ರಯಣೀಯತ್ವವೂ—ಕ್ರಮೇಣ ೧೦ ದಶಕಗಳಲ್ಲಿಯೂ ಶ್ರೀ ಶಠಾರಿಮುನಿವರ್ಯರಿಂದ ವರ್ಣಿಸಲ್ಪಟ್ಟಿವೆ.

**ಈ ಪ್ರಕಾರ ಈ ಆರನೆಯ ಶತಕದಲ್ಲಿ ಸಿದ್ಧೋಪಾಯ ಸ್ವೀಕಾರ ಕ್ರಮವು ಪ್ರತಿಪಾದಿತವಾಗಿದೆ.**

—❀—

ಶ್ರೀಮದ್ವ್ಯಾದವಶೈಲಶೃಙ್ಗರಸಿಕಾ ಶ್ರೀಕಲ್ಕಿಸಿಂಹಾತ್ಮನಾ
ಶ್ರೀಮಲ್ಲೋಕ್ಷ್ಣರಕೃಷ್ಣಸನ್ನಿಧಿಜುಷಾ ಕಲ್ಯಾಣಪುಣ್ಯಾಮಿಷಃ ।
ಸರ್ವೇಷಾಂ ಜಗತಾಂ ತಮುಕ್ತಮುಯುತಾ ಕರ್ಣಾಟವಾಣ್ಯಾಖ್ಯಯಾ
ವ್ಯಾಖ್ಯಾತಂ ಶತಕಂ ಚ ಷಷ್ಠಮತುಲಂ ಗಾಥಾಸಹಸ್ರೇ ಮುನೇಃ ॥

—❀—

ಲಲಿತಸರಣಿನಾಮ್ನಾ ಕೋಮಲಾ ದಿವ್ಯಭಾವಾ
ಜಯತು ಜಗತಿ ಟೀಕಾ ಮೋದಿತ್ರ ಕರ್ಣಾಟವಾಣ್ಯಾ ।
ಶಠರಿಪುಮುನಿಗಾಥಾದಿವ್ಯಸಾಹಸ್ರಮಾಲಾ-
ವಿವೃತಿರಮೃತಪೂರ್ಣಾ ಲೋಕಸಞ್ಜೀವಿನೀಯಂ